14) ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2) ರಡಿಯಲ್ಲಿ ನಿಗದಿಪಡಿಸಿರುವ ನಮೂನೆ/ ಫಾರಂ-VI ರಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ, ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ಪಿ.ಆರ್.703 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

**ಸಂಖ್ಯೆ: ಎಲ್.ಎನ್.ಡಿ:(ಪೂ) ಸಿಆರ್:212/07-08, ಬೆಂಗಳೂರು, ದಿನಾಂಕ:18ನೇ ಜೂನ್, 2008**

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಹಂಚರಹಳ್ಳಿ ಗ್ರಾಮದ ಸ.ನಂ.52 ರಲ್ಲಿನ 13-30 ಎಕರೆ: ಗುಂಟೆ ಸರ್ಕಾರಿ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ:265:ಎಲ್‌ಜಿಬಿ:2007 (ಪಿ-6) ಬೆಂಗಳೂರು, ದಿ:13.05.2008.

2) ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್‌ಎನ್‌ಡಿ: ಸಸ:ಸಿಆರ್:490/07-08, ದಿನಾಂಕ:24.10.2007.

3) ಈ ಕಛೇರಿ ಸಮ ಸಂಖ್ಯೆ ತಿಳುವಳಿಕೆ ಪತ್ರದ ದಿನಾಂಕ:03.11.2007.

4) ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರ ಪತ್ರಸಂಖ್ಯೆ: ಬೆಂಮಸಾಸಂ: ಕೇಕ:ವಾಣಿಜ್ಯ: ಆಸ್ತಿ: 2219/07-08, ದಿನಾಂಕ:18.12.2007.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3,313-28 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಸರ್ಕಾರಿ/ ಸಾರ್ವಜನಿಕ ಉಪಯೋಗಕ್ಕಾಗಿ ಸಂಬಂಧಿಸಿದ ಸಂಸ್ಥೆಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನಲೆಯಲ್ಲಿ, ಉಲ್ಲೇಖ (1)ರಲ್ಲಿನ ಸರ್ಕಾರ ನಡವಳಿ ಆದೇಶದ ಸಂಖ್ಯೆ: ಆರ್‌ಡಿ 265:ಎಲ್‌ಜಿಬಿ 2007 (ಪಿ-6), ಬೆಂಗಳೂರು ದಿನಾಂಕ:13.05.2008ರ ಆದೇಶದಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಹಂಚರಹಳ್ಳಿ ಗ್ರಾಮದ ಸ.ನಂ.52 ರಲ್ಲಿನ 13-30 ಎಕರೆ/ ಗುಂಟೆ ಸರ್ಕಾರಿ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಶೇ.50ರಷ್ಟು ಮಾರುಕಟ್ಟೆ ಬೆಲೆ ನಿಗದಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1)(ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕ ಸೇರಿ ಒಟ್ಟು ರೂ.3,26,45,855-00 (ಮೂರು ಕೋಟಿ ಇಪ್ಪತ್ತಾರು ಲಕ್ಷದ ನಲವತ್ತೈದು ಸಾವಿರದ ಎಂಟುನೂರ ಐವತ್ತೈದು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ತಿಳುವಳಿಕೆ ಪತ್ರವನ್ನು ನೀಡಲಾಗಿರುತ್ತದೆ. ಅದರಂತೆ ಮೇಲ್ಕಂಡ ಸಂಸ್ಥೆಯವರು ಸರ್ಕಾರಕ್ಕೆ ಚಲನ್ ನಂ.11 ರಂತೆ ದಿನಾಂಕ:14.12.2007 ರಂದು ಹಣ ಸಂದಾಯ ಮಾಡಿ, ಮೂಲ ಚಲನ್ ಹಾಜರುಪಡಿಸಿದ್ದು, ನಕ್ಷೆಯೊಂದಿಗೆ ಸಂಸ್ಥೆಗೆ ಜಮೀನನ್ನು ಹಸ್ತಾಂತರಿಸುವಂತೆ ಉಲ್ಲೇಖ (4)ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಹಂಚರಹಳ್ಳಿ ಗ್ರಾಮದ ಸ.ನಂ.52 ರಲ್ಲಿನ 13-30 ಎಕರೆ/ ಗುಂಟೆ ಸರ್ಕಾರಿ ಜಮೀನನ್ನು ಗೋಮಾಳ ಎಂದು ವರ್ಗೀಕೃತವಾದ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತುಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

### ಷರತ್ತುಗಳು

1) ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.

2) ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.

3) ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.

4) ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆ, ಆಧಾರ, ಭೋಗ್ಯಕ್ಕೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯುವ ಉದ್ದೇಶಕ್ಕೆ ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತಿರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ ಸಂಸ್ಥೆ ಮತ್ತು ಇತರೆ ಪ್ರಾಧಿಕಾರಗಳು ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.

5) ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.

6) ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.

7) ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

8) ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವೆಂದು ಕಂಡುಬಂದಲ್ಲಿ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಅಭಿವೃದ್ಧಿಪಡಿಸಿದ ಬಾಬ್ತು ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.

9) ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಿಗಳಿಗೆ ನಿಗದಿತ ಶುಲ್ಕ ಸಂದಾಯ/ ತೆರಿಗೆ ಸಂದಾಯ ಮಾಡಿ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.

10) ಶಾಸನಬದ್ಧ ಕಾಯ್ದೆಗಳ ಕಟ್ಟುಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

11) ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆ ಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.

12) ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

13) ಈ ಜಮೀನಿನಲ್ಲಿ ದೊಡ್ಡ ಮತ್ತು ಸಣ್ಣ ಕೆರೆಕಟ್ಟೆ ಇತ್ಯಾದಿಗಳಿದ್ದಲ್ಲಿ ನಕಾಶೆ ದಾರಿಗಳಿದ್ದಲ್ಲಿ ಸಾರ್ವಜನಿಕ ಆಸ್ತಿಯನ್ನು ಸಂರಕ್ಷಿಸಿ ನಿರ್ವಹಿಸತಕ್ಕದ್ದು. ಇವುಗಳ ಮೇಲೆ ಮಂಜೂರಿದಾರರಿಗೆ ಯಾವುದೇ ಹಕ್ಕು ಇರುವುದಿಲ್ಲ.

14) ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2) ರಡಿಯಲ್ಲಿ ನಿಗದಿಪಡಿಸಿರುವ ನಮೂನೆ/ ಫಾರಂ–VI ರಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ, ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.704

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

**ಸಂಖ್ಯೆ: ಎಲ್.ಎನ್.ಡಿ:(ಎ) ಸಿಆರ್:187/2007–08, ಬೆಂಗಳೂರು, ದಿನಾಂಕ:31ನೇ ಮೇ, 2008**

**ವಿಷಯ:** ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಕಸಬಾ ಹೋಬಳಿ, ಬಿದರಕಾಡಹಳ್ಳಿ ಗ್ರಾಮದ ಸರ್ವೆ ನಂ. 11ರಲ್ಲಿ 14–04 ಎ.ಗುಂ: ಜಮೀನನ್ನು ಕರ್ನಾಟಕ ಸಣ್ಣ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ ಇವರಿಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ:265:ಎಲ್‌ಜಿಬಿ/07 (ಭಾಗ–6) ಬೆಂಗಳೂರು, ದಿ:18.10.2007.
2) ತಹಶೀಲ್ದಾರ್, ಆನೇಕಲ್ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್‌ಎನ್‌ಡಿ ಸಿ.ಆರ್.313/ 07–08.
3) ಪ್ರಧಾನ ವ್ಯವಸ್ಥಾಪಕರು, (ಆ ಮತ್ತು ಭೂಸ್ವಾಧೀನ), ಕರ್ನಾಟಕ ಸಣ್ಣ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ ಬೆಂಗಳೂರು ಇವರ ಪತ್ರದ ಸಂಖ್ಯೆ: ಭೂಸ್ವಾಧೀನ/34/2007–08, ದಿನಾಂಕ:24.03.2008.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3313–28 ಎಕರೆಗಳಲ್ಲಿ ವಿವಿಧ ಸರ್ಕಾರಿ/ ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಅಗತ್ಯವಾಗಿರುವ ಹಿನ್ನೆಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ ಉಲ್ಲೇಖ(1)ರಲ್ಲಿನ ಸರ್ಕಾರದ ಆದೇಶದಲ್ಲಿ ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಕಸಬಾ ಹೋಬಳಿ, ಬಿದರಕಾಡಹಳ್ಳಿ ಗ್ರಾಮದ ಸರ್ವೆ ನಂ.11ರಲ್ಲಿ 14–04 ಎ.ಗುಂ: ಜಮೀನನ್ನು ಕರ್ನಾಟಕ ಸಣ್ಣ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ ಇವರಿಗೆ ಬೆಲೆ ನಿಗದಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 20(1)(ಸಿ) ರನ್ವಯ ಮಂಜೂರಾತಿ ಮಾಡಲು ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಣ್ಣಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ ಇವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕಗಳು ಸೇರಿ ಒಟ್ಟು ರೂ.1,40,89,339/– (ಒಂದು ಕೋಟಿ ನಲವತ್ತು ಲಕ್ಷದ ಎಂಭತ್ತೊಂಭತ್ತು ಸಾವಿರದ ಮೂರು ನೂರ ಮೂವತ್ತೊಂಭತ್ತು ರೂ.ಗಳು ಮಾತ್ರ) ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ದಿನಾಂಕ:17.11.2007 ರಂದು ತಿಳುವಳಿಕೆ ಪತ್ರ ನೀಡಲಾಗಿತ್ತು ಅದರಂತೆ ಉಲ್ಲೇಖ (3)ರನ್ವಯ ಮೇಲ್ಕಂಡ ಸಂಸ್ಥೆಯವರು ಚಲನ್ ದಿನಾಂಕ:19.03.2008 ರಂದು ಸರ್ಕಾರಕ್ಕೆ ಹಣ ಪಾವತಿಸಿರುವ ಮೂಲ ಚಲನ್‌ನ್ನು ಹಾಜರುಪಡಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಉಲ್ಲೇಖ (1) ರ ಸರ್ಕಾರದ ಆದೇಶದಂತೆ ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಕಸಬಾ ಹೋಬಳಿ, ಬಿದರಕಾಡಹಳ್ಳಿ ಗ್ರಾಮದ ಸರ್ವೆ ನಂ.11 ರಲ್ಲಿ 14–04 ಎ.ಗುಂ. ಜಮೀನನ್ನು ಕರ್ನಾಟಕ ಸಣ್ಣ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ ಇವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1) ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.

2) ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ ಎರಡು ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.

3) ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.

4) ಸಂಸ್ಥೆಗೆ ಮಂಜೂರಾದ ಜಮೀನನ್ನು ಬೇರೆ ಯಾರಿಗೂ ಗುತ್ತಿಗೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನಿನ ಮೇಲೆ ಯಾವುದೇ ಬ್ಯಾಂಕ್/ ಸಹಕಾರ ಸಂಘಗಳಿಂದ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಬಹುದಾಗಿದ್ದು, ಸಾಲ ತಿರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟುಗೋಲು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.

5) ಈ ಜಮೀನನ್ನು ಯಾವ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿದೆಯೋ, ಅದೇ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಬೇಕು ಹಾಗೂ ಇನ್ನಿತರ ಉದ್ದೇಶಗಳಿಗಾಗಿ ಈ ಜಮೀನನ್ನು ಬಳಸಬಾರದು.

6) ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.

7) ಪ್ರಶ್ನಿತ ಜಮೀನಿನ ಬಗ್ಗೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

8) ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದಲ್ಲಿ ಸರ್ಕಾರಕ್ಕೆ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.

9) ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಕಾನೂನು ರೀತಿ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.

10) ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.

11) ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

12) ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 20(1)(ಸಿ) ರನ್ವಯ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರು ಪತ್ರವನ್ನು ಬರೆದುಕೊಡತಕ್ಕದ್ದು.

13) ಶಾಸನಬದ್ಧ ಕಾಯ್ದೆಗಳ ಕಟ್ಟುಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘಿಸಿದಲ್ಲಿ ಈ ಭೂ ಮಂಜೂರಾತಿಯು ತಾನೇ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.705

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ**

**ಡಿಕ್ರಿ ಆದೇಶ ಸಂಖ್ಯೆ: 680:97–98/812**

**ಅಮಲ್ಜಾರಿ ಸಂಖ್ಯೆ:720:98–99**

**ಅರ್ಜಿದಾರರು:** ಕಾರ್ಯದರ್ಶಿ, ಸಿಟಿ ಕೋ–ಆಪರೇಟಿವ್ ಬ್ಯಾಂಕ್ ನಿ., ಶಿವಮೊಗ್ಗ.

**ಪ್ರತಿವಾದಿಗಳು:** ಶಹಜನಾಭಿ ಕೋಂ ವಾಹಬ್‌ಸಾಬ್, ಚಂದ್ರಶೇಖರ ರೈಸ್ ಮಿಲ್ ಹತ್ತಿರ, ಬಿ.ಹೆಚ್. ರಸ್ತೆ, ವಿದ್ಯಾನಗರ, ಶಿವಮೊಗ್ಗ.

**ವಿಷಯ:** ಸುಸ್ತಿದಾರ ಪ್ರತಿವಾದಿಗಳು ಸಾಲ ಮರುಪಾವತಿ ಮಾಡದ ಪ್ರಯುಕ್ತ ಇವರ ವಿರುದ್ಧ ನ್ಯಾಯಾಲಯದಿಂದ ಪಡೆದ ಅಮಲ್ಜಾರಿ ಆದೇಶದಲ್ಲಿ ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಭಾಗವಹಿಸದೇ ಇದ್ದ ಪ್ರಯುಕ್ತ ಪ್ರತಿವಾದಿಯ ಸ್ಥಿರಾಸ್ತಿಯನ್ನು ಅರ್ಜಿದಾರರು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101(ಬಿ) ಮೇರೆಗೆ ಸೊತ್ತುಗಳ ವರ್ಗಾವಣೆ ಮಾಡಿರುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಇ.ಪಿ. ಆದೇಶ ಸಂಖ್ಯೆ: 720:98-99.
2) ಮಾರಾಟಾಧಿಕಾರಿಗಳ ಪ್ರಸ್ತಾವನೆ ದಿನಾಂಕ:07.11.2003.
3) ಈ ಕಛೇರಿಯಿಂದ ಪ್ರತಿವಾದಿಗಳಿಗೆ ಕೊಟ್ಟ ನೋಟೀಸ್ ದಿನಾಂಕ:02.01.2004.
4) ಕ್ರ.ಸಂ. ಸನಿಶಿ24: ಎಬಿಎನ್: ಇಪಿ:04-05, ದಿನಾಂಕ:05.02.2005.

**ಪ್ರಸ್ತಾವನೆ:**

ಅರ್ಜಿದಾರರಾದ ಕಾರ್ಯದರ್ಶಿ, ಸಿಟಿ ಕೋ-ಆಪರೇಟಿವ್ ಬ್ಯಾಂಕ್ ನಿ., ಶಿವಮೊಗ್ಗ ಇವರ ಪರವಾಗಿ ಮಾರಾಟಾಧಿಕಾರಿಗಳು ಉಲ್ಲೇಖ (2)ರಲ್ಲಿ ಶ್ರೀಮತಿ ಶಹಜನಾಭಿ ಕೋಂ ವಾಹಬ್‌ಸಾಬ್, ಶಿವಮೊಗ್ಗ ಇವರು ಅರ್ಜಿದಾರ ಬ್ಯಾಂಕಿನಿಂದ ಪಡೆದ ಸಾಲದ ಮೊತ್ತವನ್ನು ಮರುಪಾವತಿ ಮಾಡದೇ ಇದ್ದುದ್ದರ ಪ್ರಯುಕ್ತ ನಿಯಮಾನುಸಾರ, ಹರಾಜು ನಿಗದಿಪಡಿಸಿದ್ದು, ಹರಾಜು ದಿನಾಂಕದಂದು, ತೀರ್ಪುಋಣಿಗಳ ಸ್ಥಿರಾಸ್ತಿಯನ್ನು ಬಿಡ್ ಮಾಡಲು ಬಿಡ್‌ದಾರರು ಭಾಗವಹಿಸದೇ ಇದ್ದ ಪ್ರಯುಕ್ತ ಸದರೀ ಸ್ಥಿರಾಸ್ತಿಯನ್ನು ಅರ್ಜಿದಾರರ ಬ್ಯಾಂಕಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101(ಬಿ)ಯ ಮೇರೆಗೆ ಅರ್ಜಿದಾರರ ಬ್ಯಾಂಕಿನ ಹೆಸರಿಗೆ ವರ್ಗಾಯಿಸಲು ಕೋರಿದ್ದ ಮೇರೆಗೆ, ಉಲ್ಲೇಖ (4)ರ ರೀತ್ಯಾ ಸದರಿ ಸ್ಥಿರಾಸ್ತಿಯನ್ನು ಅರ್ಜಿದಾರರ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಲು ಆದೇಶವನ್ನು ನೀಡಲಾಗಿರುತ್ತದೆ. ಉಲ್ಲೇಖ (5)ರ ಪತ್ರದಲ್ಲಿ ವರ್ಗಾವಣೆ ಆದೇಶದಂತೆ ಸದರಿ ಆಸ್ತಿಯ ಕಂದಾಯ ಬಾಕಿ ಹಾಗೂ ವರ್ಗಾವಣೆ ವೆಚ್ಚ ದುಬಾರಿಯಾದ ಕಾರಣ, ಈವರೆವಿಗೂ ವರ್ಗಾವಣೆ ಪ್ರಕ್ರಿಯೆ ನಡೆದಿರುವುದಿಲ್ಲ. ಈ ಮಧ್ಯೆ ಬ್ಯಾಂಕಿನಿಂದ ಜಾರಿಗೊಳಿಸಿದ ಏಕಕಾಲಿಕ ಸಾಲ ತೀರುವಳಿ ಯೋಜನೆಯಡಿಯಲ್ಲಿ ಶೇಕಡಾ 14ರ ಬಡ್ಡಿ ದರದಲ್ಲಿ ಸಾಲ ತೀರುವಳಿ ಮಾಡಲು ಅವಕಾಶ ದೊರೆತ ಫಲವಾಗಿ, ಸಾಲಗಾರರು ಸಾಲದ ಬಾಕಿಯನ್ನು ದಿನಾಂಕ:23.08.2008 ರಲ್ಲಿ ಪೂರ್ಣ ತೀರುವಳಿ ಮಾಡಿರುತ್ತಾರೆ. ಈ ಬಗ್ಗೆ ದಿನಾಂಕ:27.08.2008 ರಂದು ನಡೆದ ಆಡಳಿತ ಮಂಡಳಿ ಸಭೆಯಲ್ಲಿ ಸದರಿ ಸೊತ್ತಿನಲ್ಲಿ ನೀಡಿರುವ ವರ್ಗಾವಣೆ ಆದೇಶವನ್ನು ರದ್ದುಪಡಿಸಿ, ಸೊತ್ತುಗಳನ್ನು ಸಾಲಗಾರರಿಗೆ ವಾಪಸ್ಸು ಮಾಡುವ ಬಗ್ಗೆ ತೀರ್ಮಾನಿಸಿರುತ್ತಾರೆ ಎಂದು ವರದಿ ನೀಡಿರುತ್ತಾರೆ.

ಕಾರ್ಯದರ್ಶಿಗಳು, ಸಿಟಿ ಕೋ-ಆಪರೇಟಿವ್ ಬ್ಯಾಂಕ್ ನಿ., ಶಿವಮೊಗ್ಗ ಇವರ ವರದಿ ಹಾಗೂ ದಿನಾಂಕ:27.08.2008ರ ಆಡಳಿತ ಮಂಡಳಿ ನಿರ್ಣಯದಂತೆ ಉಲ್ಲೇಖ (4)ರ ಆದೇಶದಲ್ಲಿ ಸ್ಥಿರ ಸೊತ್ತಿನ ವರ್ಗಾವಣೆ ಬಗ್ಗೆ ನೀಡಿರುವ ಪ್ರಮಾಣಪತ್ರದಲ್ಲಿನ ಷರತ್ತು ಮತ್ತು ನಿಯಮಗಳಲ್ಲಿ ತಿಳಿಸಿರುವಂತೆ ತೀರ್ಪುಋಣಿಗಾರರಾದ ಶಹಜನಾಭಿ, ಕೋಂ ವಾಹಬ್‌ಸಾಬ್ ರವರು ಬ್ಯಾಂಕಿನ ಸಾಲವನ್ನು ಏಕಕಾಲಿಕ ಸಾಲ ತೀರುವಳಿ ಯೋಜನೆಯಡಿಯಲ್ಲಿ ಪ್ರಯೋಜನವನ್ನು ಪಡೆದು, ಬಡ್ಡಿಸಹಿತವಾಗಿ ತೀರುವಳಿ ಮಾಡಿರುವುದರಿಂದ ಈ ಕಛೇರಿಯಿಂದ, ನೀಡಿದ ಉಲ್ಲೇಖ (4)ರ ಆದೇಶವನ್ನು ಹಿಂಪಡೆದು, ತೀರ್ಪುಋಣಿಗಾರರ ಸ್ಥಿರಾಸ್ತಿಯನ್ನು ಅವರ ಒಡೆತನಕ್ಕೆ ಬಿಟ್ಟುಕೊಡಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ ನೀಡಿದೆ.

**ಆದೇಶ**

**ಕ್ರ.ಸನಿ.24: ಎಬಿಎನ್:ಇಪಿ:08-09, ದಿನಾಂಕ:30ನೇ ಅಕ್ಟೋಬರ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಈ ಕೆಳಕಂಡ ಷೆಡ್ಯೂಲ್ ಸೊತ್ತನ್ನು ಅರ್ಜಿದಾರರಾದ ಕಾರ್ಯದರ್ಶಿ, ಸಿಟಿ ಕೋ-ಆಪರೇಟಿವ್ ಬ್ಯಾಂಕ್ ನಿ., ಶಿವಮೊಗ್ಗ ಇವರಿಗೆ ಈ ಕಛೇರಿಯಿಂದ ಉಲ್ಲೇಖ (4)ರನ್ವಯ ನೀಡಿದ ಸೊತ್ತು ವರ್ಗಾವಣೆ ಆದೇಶವನ್ನು ಕೂಡಲೇ ಜಾರಿಗೆ ಬರುವಂತೆ ಹಿಂಪಡೆದಿದ್ದು, ಸದರಿ ಸೊತ್ತಿನ ಮೇಲೆ ಶಹಜನಾಭಿ, ಕೋಂ ವಾಹಬ್‌ಸಾಬ್ ಇವರು ಈ ಆದೇಶ ಹೊರಡಿಸುವ ಮೊದಲು ಇದ್ದಂತೆ ಹಕ್ಕುಳ್ಳವರಾಗಿರುತ್ತಾರೆಂದು ಆದೇಶಿಸಿದೆ.

**ಷೆಡ್ಯೂಲ್ ಸ್ಥಿರ ಸೊತ್ತಿನ ವಿವರ**

| ಸ್ಥಿರಾಸ್ತಿಇರುವ ಸ್ಥಳ | ಸರ್ವೆ ನಂ. | ವಿಸ್ತೀರ್ಣ | ತರಹೆ | ಡಿಕ್ರಿ ಹೊಂದಿದ ಹಕ್ಕಿನ ಸ್ವಭಾವ |
|---|---|---|---|---|
| ಶಿವಮೊಗ್ಗ ನಗರದ ಇಸ್ಲಾಪುರ ಬಡಾವಣೆಯಲ್ಲಿ | ಮುಟೇಷನ್ ನಂ.1161:1066 ಮತ್ತು 1918: 1878 | 10x30 ಅಡಿಗಳು | ಮಂಗಳೂರು ಹಂಚಿನ ಮನೆ ಮತ್ತು ಹಿತ್ತಲು ಮುಂದೆ ಭಾಗ ಸೇರಿ | ಶಹಜನಾಭಿ, ಕೋಂ ವಾಹಬ್‌ಸಾಬ್, ಚಂದ್ರಶೇಖರ್ ರೈಸ್ ಮಿಲ್ ಹತ್ತಿರ, ಬಿ.ಹೆಚ್. ರಸ್ತೆ, ವಿದ್ಯಾನಗರ, ಶಿವಮೊಗ್ಗ. |

**ಇದಕ್ಕೆ ಚಕ್ಕುಬಂದಿ**

ಪೂರ್ವ: ನೂರ್‌ಜಹಾನ್ ಇವರ ಸ್ವತ್ತು.
ಪಶ್ಚಿಮ: ಬಾವಿ ಮತ್ತು ಖಾಲಿ ಜಾಗ
ಉತ್ತರ : ಓಣಿ
ದಕ್ಷಿಣ: ಚಂದ್ರಶೇಖರ ರೈಸ್ ಮಿಲ್ ಬಾಬ್ತು ಗೋಡೆ.

ಈ ಆದೇಶವನ್ನು ಈ ದಿನ ದಿನಾಂಕ:30.10.2008 ರಂದು ಕಛೇರಿಯ ಮುದ್ರೆ ಮತ್ತು ನನ್ನ ಸಹಿಯೊಂದಿಗೆ ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

ಪಿ.ಆರ್.1243

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, 1ನೇ ವೃತ್ತ, ಮಾರ್ಗೋಸ ರಸ್ತೆ, ಮಲ್ಲೇಶ್ವರಂ, ಬೆಂಗಳೂರು ಇವರ ನಡವಳಿಕೆಗಳು

**ವಿಷಯ:** ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ನಿ., ಶಿರಸಿ, ಪಶ್ಚಿಮ ಕಾರ್ಡ್ ರಸ್ತೆ ಶಾಖೆ, ರಾಜಾಜಿನಗರ ಬೆಂಗಳೂರು ಇವರ ಅಮಲ್ಜಾರಿ ಅರ್ಜಿ ಸಂಖ್ಯೆ: ಸಿಇಪಿ ಸಂಖ್ಯೆ: 66/07–08 ಸಂಬಂಧಪಟ್ಟಂತೆ ಸ್ಥಿರಾಸ್ತಿಯನ್ನು 1960ನೇ ಸಹಕಾರ ಸಂಘಗಳ ನಿಯಮಗಳ ನಿಯಮ 38(5(ಎ) ರನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:** 1) ದಾವಾ ಸಂಖ್ಯೆ: ಜೆಆರ್‌ಡಿ/ ಯುಬಿಎಫ್/566/2005–06.
2) ಅಮಲ್ಜಾರಿ ಅರ್ಜಿ ಸಂಖ್ಯೆ: 66/07–08.
3) ಮಾರಾಟಾಧಿಕಾರಿಯವರ ವರದಿ ದಿನಾಂಕ;22.09.2008.

**ಪ್ರಸ್ತಾವನೆ:**

ಶ್ರೀ ಜಿ.ಎನ್.ಎಸ್. ಶರ್ಮ, ಹೊಸ ನಂ.32/1, ಹಳೆಯ ನಂ.1343, 5ನೇ ಕ್ರಾಸ್, ಅಶೋಕ ನಗರ, ಬೆಂಗಳೂರು–50 ಇವರು ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ನಿ., ಶಿರಸಿ, ಪಶ್ಚಿಮಕಾರ್ಡ್ ರಸ್ತೆ ಶಾಖೆ, ರಾಜಾಜಿನಗರ, ಬೆಂಗಳೂರು–560010 ಈ ಬ್ಯಾಂಕಿನಿಂದ ದಿನಾಂಕ:13.09.2000 ರಂದು ರೂ.25,00,000/– (ಇಪ್ಪತ್ತೈದು ಲಕ್ಷ ಮಾತ್ರ) ಗಳನ್ನು ಸ್ಥಿರಾಸ್ತಿ ಅಡಮಾನ ಮಾಡಿ ಸಾಲವಾಗಿ ಪಡೆದು ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಸಾಲ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರನ್ವಯ ಸಹಕಾರ ಸಂಘಗಳ ಜಂಟಿ ನಿಬಂಧಕರು, (ನಿ–441) ದಾವಾ ಪಂಚಾಯ್ತಿ ನ್ಯಾಯಾಲಯ, ಕ.ರಾ.ಸ.ಪ. ಬ್ಯಾಂಕುಗಳ ಮಹಾಮಂಡಳ ನಿ. ಹುಬ್ಬಳ್ಳಿ ಪ್ರಾಂತ ಹುಬ್ಬಳ್ಳಿ ಇವರ ನ್ಯಾಯಾಲಯದಲ್ಲಿ ದಾವಾ ಸಂಖ್ಯೆ: ಜೆಆರ್‌ಡಿ/ ಯುಬಿಎಫ್/566/ 2005–06 ರಂತೆ ದಾವಾ ಹೂಡಿ ಆದೇಶ ಪಡೆದಿದ್ದರೂ ಸಾಲದ ಬಾಕಿ ವಸೂಲಾತಿಯಾಗಿರುವುದಿಲ್ಲ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ–441) ದಾವಾ ಪಂಚಾಯ್ತಿ ನ್ಯಾಯಾಲಯ ಕ.ರಾ.ಸ.ಪ. ಬ್ಯಾಂ.ಮ. ನಿಯಮಿತ ಹುಬ್ಬಳ್ಳಿ, ಪ್ರಾಂತ ಹುಬ್ಬಳ್ಳಿ ಇವರ ನ್ಯಾಯಾಲಯದಿಂದ ಪಡೆದ ಡಿಕ್ರಿ ಆದೇಶದನ್ವಯ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 34(1)ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿರವರಲ್ಲಿ ಮೂಲತಃ ಸಿಇಪಿ ಸಂಖ್ಯೆ: 66/2007–08 ರಂತೆ ದಾಖಲಾಗಿ ಮುಂದಿನ ವಸೂಲಿ ಕ್ರಮದ ಬಗ್ಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, 1ನೇ ವಲಯ ಮಲ್ಲೇಶ್ವರಂ, ಬೆಂಗಳೂರು–03 ಇವರ ಕಛೇರಿಗೆ ವರ್ಗಾವಣೆ ಆಗಿರುವಂತೆ ಸದರಿ ಅಮಲ್ಜಾರಿ ಅರ್ಜಿಯನ್ನು ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರು ಅಂತಿಮವಾಗಿ ಅಮಲ್ಜಾರಿ ಕ್ರಮಕೈಗೊಂಡು ಸಾಲಕ್ಕೆ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ದಿನಾಂಕ:07.08.2008 ರಂದು ಸಾರ್ವಜನಿಕ ಹರಾಜಿಗೆ ತರಲಾಗಿದ್ದು. ಸದರಿ ದಿನ ನಡೆಸಿದ ಹರಾಜಿನಲ್ಲಿ 8 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ ಶ್ರೀ ಲಲಿತ್‌ರಾಜ್ ಎಂ. ಮನೆ ನಂ.338/ವೈ.9ನೇ ಮೈನ್, 2ನೇ ಕ್ರಾಸ್, 7ನೇ ಬ್ಲಾಕ್, ಬನಶಂಕರಿ 3ನೇ ಹಂತ, ಬೆಂಗಳೂರು–85 ಇವರು ರೂ.33,50,000.00 (ಮೂವತ್ತಮೂರು ಲಕ್ಷ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಗಳಿಗೆ ಬಿಡ್ಡು ಮಾಡಿದ್ದು, ಅತೀ ಹೆಚ್ಚು ಬಿಡ್ಡುದಾರರಾಗಿರುತ್ತಾರೆ.

ಸದರಿ ಸ್ಥಿರಾಸ್ತಿಯನ್ನು ಬ್ಯಾಂಕಿಗೆ ಅಡಮಾನ ಮಾಡಿದ ನಂತರ ಸಾಲಗಾರರಾದ ಶ್ರೀ ಜಿ.ಎನ್.ಎಸ್. ಶರ್ಮ ರವರು ಕುಟುಂಬದಲ್ಲಿ ಆದ ವ್ಯವಸ್ಥೆ ಅನುಗುಣವಾಗಿ ತಮ್ಮ ಪತ್ನಿಯಾದ ಶ್ರೀಮತಿ ಇಂದಿರಾಕ್ಷಿಯವರ ಹೆಸರಿಗೆ ನೋಮಿನಲ್ ದಾನ ಪತ್ರ ದಿನಾಂಕ:25.01.2006 ರಂದು ನಂ.ಬಿಎಸ್‌ಜಿ.–1–05098/1–05–06 ಆಗಿ ಸಿಡಿ ನಂ. ಬಿಎಸ್‌ಜಿಡಿ 67, ಬಸವನಗುಡಿ ಉಪ ನೋಂದಣಿ ಕಛೇರಿಯಲ್ಲಿ ನೋಂದಾಯಿಸಿದ್ದು ಎಲ್ಲರ ಗಮನಕ್ಕೆ ತಂದಿರುತ್ತಾರೆ. ಸದರಿ ಆಸ್ತಿಯ ಬಹಿರಂಗ ಹರಾಜ್ ದಿನಾಂಕ:07.08.2008ರಂದು ಸಾಲಗಾರರಾದ ಶ್ರೀ ಜಿ.ಎನ್.ಎಸ್. ಶರ್ಮ ಇವರು ತಮ್ಮ ಪತ್ನಿ ಶ್ರೀಮತಿ ಇಂದಿರಾಕ್ಷಿಯವರೊಂದಿಗೆ ಹಾಜರಿದ್ದು ಸದರಿ ಆಸ್ತಿಯನ್ನು ಬಹಿರಂಗ ಹರಾಜು ಮಾಡಲು ತಮ್ಮಿಬ್ಬರ ಯಾವುದೇ ಅಭ್ಯಂತರವಿಲ್ಲವೆಂದು ಮುಚ್ಚಳಿಕೆಯನ್ನು ಈ ಕೆಳಗೆ ಸಹಿ ಮಾಡಿದವರಿಗೆ ಬರೆದುಕೊಟ್ಟಿದ್ದು ಮತ್ತು ವಿಕ್ರಿ ಪ್ರಮಾಣ ಪತ್ರವನ್ನು ನೋಂದಣಿ ಮಾಡುವ ಸಮಯಕ್ಕೆ ಬಂದು ಸಮ್ಮತಿ ಸಾಕ್ಷಿದಾರರಾಗಿ ಸಹಿಮಾಡಲು ಒಪ್ಪಿರುತ್ತಾರೆ ಮತ್ತು ಸದರಿ ಆಸ್ತಿಗೆ ಸಂಬಂಧಪಟ್ಟ ಅಸಲು ದಾನಪತ್ರವನ್ನು ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ನೀಡಿರುತ್ತಾರೆ.

ಡಿಕ್ರಿ ಆದೇಶ ಮತ್ತು ಅಮಲ್ಜಾರಿ ಅರ್ಜಿಯನ್ವಯ ಅಸಲು ರೂ.22,08,100/– ಗಳು ಬಡ್ಡಿ ಮತ್ತು ಇತರೆ ವೆಚ್ಚಗಳು ರೂ.20,64,385/– ಒಟ್ಟು ರೂ.42,72,485/– ಗಳು ಬ್ಯಾಂಕಿಗೆ ಬಾಕಿ ಬರಬೇಕಾಗಿರುತ್ತದೆ. ರೂ.33,50,000/– ಗಳ ಅತೀ ಹೆಚ್ಚಿನ ಬಿಡ್ಡುದಾರರಾದ ಶ್ರೀ ಲಲಿತ್‌ರಾಜ್ ಎಂ. ರವರು ಬಿಡ್ಡಿನ ಮೊತ್ತದ ಶೇಕಡಾ 15, ರ ಬಾಬ್ತು ರೂ.5,05,000/– (ಐದು ಲಕ್ಷದ ಐದು ಸಾವಿರ ಮಾತ್ರ) ಗಳನ್ನು ಹರಾಜಿನ ಸ್ಥಳದಲ್ಲಿಯೇ ಬ್ಯಾಂಕಿನಲ್ಲಿ ವಸೂಲಾಧಿಕಾರಿಗಳ ಅಮಾನತ್ ಖಾತೆಗೆ ಪಾವತಿ ಮಾಡಿರುತ್ತಾರೆ. ಉಳಿಕೆ ಬಾಕಿ ಬಿಡ್ ಮೊತ್ತ ರೂ.28,45,000/– (ಇಪ್ಪತ್ತೆಂಟು ಲಕ್ಷದ ನಲವತ್ತೈದು ಸಾವಿರ ಮಾತ್ರ) ಮತ್ತು ಮುದ್ರಾಂಕ ಶುಲ್ಕ ರೂ.2,81,400/– ಹಾಗೂ ನೋಂದಣಿ ಫೀ ರೂ.33,500/– ಒಟ್ಟು ರೂ.3,14,900/–ಗಳನ್ನು ದಿನಾಂಕ:20.09.2008 ರಂದು ಬ್ಯಾಂಕಿನಲ್ಲಿ ವಸೂಲಾಧಿಕಾರಿಗಳ ಅಮಾನತ್ ಖಾತೆಗೆ ಜಮಾ ಮಾಡಿರುತ್ತಾರೆ.

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ:07.08.2008ರಂದು ನಡೆಸಿದ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ಕ್ರಮವನ್ನು ನಡೆಸಿರುವುದಾಗಿ ಹಾಗೂ ಬ್ಯಾಂಕಿನ ಬಾಕಿದಾರರಾದ ಶ್ರೀ ಜಿ.ಎನ್.ಎಸ್. ಶರ್ಮರವರ ಸ್ಥಿರಾಸ್ತಿಯನ್ನು ಶ್ರೀ ಲಲಿತ್‌ರಾಜ್ ಎಂ. ರವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ (3) ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ:07.08.2008 ರಂದು ನಡೆಸಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಕೆಯನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 8 ಜನ ಬಿಡ್ಡುದಾರರು ಭಾಗವಹಿಸಿದ್ದು ಈ ಪೈಕಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಲಲಿತ್‌ರಾಜ್ ಎಂ. ಇವರಿಗೆ ರೂ.33,50,000/– (ಮೂವತ್ತಮೂರು ಲಕ್ಷದ ಐವತ್ತು ಸಾವಿರ ಮಾತ್ರ) ಗಳಿಗೆ ಮಾರಾಟ ಮಾಡಿರುವುದು ದಾಖಲೆಗಳಿಂದ ತಿಳಿದುಬಂದಿರುತ್ತದೆ. ಬಹಿರಂಗ ಹರಾಜು ನಡೆದ 45 ದಿನಗಳೊಳಗೆ ಬಾಕಿದಾರರು ವಾದಿ ಬ್ಯಾಂಕಿಗೆ ಬರಬೇಕಾದ ಸಾಲವನ್ನು ಮರುಪಾವತಿ ಮಾಡದೇ ಇರುವುದರಿಂದ ಮತ್ತು ಈ ಬಗ್ಗೆ ಯಾರಿಂದಲೂ ಯಾವುದೇ ಆಕ್ಷೇಪಣೆ ಸಲ್ಲಿಸದೇ ಇರುವುದರಿಂದ ದಿನಾಂಕ:07.08.2008 ರಂದು ನಡೆಸಲಾದ ಸ್ಥಿರಾಸ್ತಿ ಹರಾಜನ್ನು ಖಾಯಂಗೊಳಿಸಬಹುದೆಂದು ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನುಬದ್ಧವಾಗಿದೆ ಎಂದು ಕಂಡುಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣದ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರ.ಸಂ. ಎಆರ್‌ಬಿ/1:ಮಾ. ಸ್ಥಿರೀಕರಣ:05:2008–09, ದಿನಾಂಕ:26ನೇ ಸೆಪ್ಟೆಂಬರ್, 2008**

ಶ್ರೀ ಅಶ್ವಥನಾರಾಯಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, 1ನೇ ವೃತ್ತ, ಮಾರ್ಗೋಸ ರಸ್ತೆ, ಮಲ್ಲೇಶ್ವರಂ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(6)(ಎ) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ:66/2007–08 ಶ್ರೀ ಜಿ.ಎನ್.ಎಸ್. ಶರ್ಮ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ:07.08.2008 ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಲಲಿತ್‌ರಾಜ್ ಎಂ. ಮನೆ ನಂ. 338/ವೈ. 9ನೇ ಮೈನ್, 2ನೇ ಕ್ರಾಸ್, 7ನೇ ಬ್ಲಾಕ್, ಬನಶಂಕರಿ 3ನೇ ಹಂತ, ಬೆಂಗಳೂರು–85, ಇವರು ಅತೀ ಹೆಚ್ಚಿನ ಬಿಡ್ಡುದಾರರಾಗಿದ್ದು, ಇವರಿಗೆ ರೂ.33,50,000.00 (ಮೂವತ್ತಮೂರು ಲಕ್ಷ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುವುದಾಗಿ ಈ ಮೂಲಕ ಆದೇಶ ಮಾಡಿದೆ. ಅಲ್ಲದೆ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ನಿ., ಶಿರಸಿ, ಪಶ್ಚಿಮ ಕಾರ್ಡ್ ರಸ್ತೆ ಶಾಖೆ, ರಾಜಾಜಿನಗರ, ಬೆಂಗಳೂರು–560010 ಇವರಲ್ಲಿ ಸಹಕಾರಿ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, 1ನೇ ವಲಯ, ಮಲ್ಲೇಶ್ವರಂ, ಬೆಂಗಳೂರು ಇವರ ಅಮಾನತ್ ಖಾತೆಯಲ್ಲಿ ಜಮಾ ಇರುವ ಒಟ್ಟು ರಖಂ ರೂ.36,64,900/– ದಲ್ಲಿ ಬಾಕಿದಾರನ ಸಾಲದ ರೂ.33,50,000/–ಗಳನ್ನು ಜಮಾ ಪಡೆದುಕೊಳ್ಳಲು ಮತ್ತು ಉಳಿದ ರೂ.3,14,900/–ಗಳಲ್ಲಿ ಮುದ್ರಾಂಕ ಶುಲ್ಕಕ್ಕೆ ರೂ.2,81,400/– ಹಾಗೂ ನೋಂದಣಿ ಫೀ ಬಗ್ಗೆ ರೂ.33,500/– ಭರಣ ಮಾಡಲು ಸಹ ಈ ಮೂಲಕ ಆದೇಶ ನೀಡಲಾಗಿದೆ.

**ಸ್ಥಿರಾಸ್ತಿಯ ವಿವರ**

ಬೆಂಗಳೂರು ಮಹಾನಗರ ಪಾಲಿಕೆ, ವಾರ್ಡ್ ನಂ.51, ಬಸವನಗುಡಿ ಹೊಸ ನಂ.32/1, ಹಳೆಯ ನಂ.1343, 5ನೇ ಕ್ರಾಸ್, ಅಶೋಕ ನಗರ, ಬೆಂಗಳೂರು–50 ರಲ್ಲಿರುವ ಪೂರ್ವ–ಪಶ್ಚಿಮ 20 ಅಡಿಗಳು, ಉತ್ತರ–ದಕ್ಷಿಣ 61 ಅಡಿಗಳು ಹಾಗೂ ಇದರಲ್ಲಿ ಇರತಕ್ಕ ಇಮಾರತು ಸಹಿತ, ಇದರ ಚಕ್‌ಬಂಧಿ ಈ ಕೆಳಗಿನಂತಿರುತ್ತದೆ.

ಪೂರ್ವಕ್ಕೆ: ಖಾಸಗಿ ಆಸ್ತಿ ನಂ.1342
ಪಶ್ಚಿಮಕ್ಕೆ: ಖಾಸಗಿ ಆಸ್ತಿ ನಂ.1344
ಉತ್ತರಕ್ಕೆ: ಖಾಸಗಿ ಆಸ್ತಿ ನಂ.1305
ದಕ್ಷಿಣಕ್ಕೆ: 5ನೇ ಅಡ್ಡ ರಸ್ತೆ.
ಮಾರಾಟದ ಮೊಬಲಗು : 33,50,000/–
ಮಾರಾಟ ಮಾಡಿದ ದಿನಾಂಕ:07.08.2008

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:26.09.2008ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ
ವಸೂಲಾಧಿಕಾರಿಗಳು, ಬೆಂಗಳೂರು 1ನೇ ವೃತ್ತ,
ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–03.

**CO-OPERATIVE DEPARTMENT**

**FORM NO.10**

**CERTIFICATE OF SALE** ISSUED UNDER RULE 38(7) OF KARNATAKA CO-OPERATIVE SOCIETIES RULES 1960.

**NAME SRI ASWATHNARAYANA**

ASSISTANT REGISTRAR OF CO-OPERATIVE SOCIETIES & RECOVERY OFFICER 1ST CIRCLE, MARGOSA ROAD, MALLESHWARAM, BANGALORE-560003.

1. Decree No. JRD/UBF/566/2005-2006.
2. CEP No.66/2007-2008.

**DECREE HOLDER**

THE SIRSI URBAN SAHAKARI BANK LIMITED, SIRSI REPRESENTED BY GENERAL MANAGER.

**JUDGEMENT DEBTOR**

Sri G.N.S. Sharma, No.32/1, 5th Cross, Ashoknagar, BSK Ist Stage, Bangalore-560050.

Sri G.P. Prabhu,
The Barons, Near Sadashivanagar Bashyam Circle, 2nd Main, Vyalikaval, Bangalore-560003.
Smt. Geetha P. Shanbhag, Shanbhag Nursing Home, Basaveshwaranagar, Bangalore-560079.

This is to certify that Sri Lalithraj M. S/o B. Madhav Kulal has purchased at a public auction held by the Sale Officer.

The Sirsi Urban Sahakari Bank Limited, WOC Branch, Bangalore. The under mentioned immovable property for arrears due to The Sirsi Urban Sahakari Bank Limited, WOC Branch, Bangalore by Sri G.N.S. Sharma Residing at No.32/1, 5th Cross, Ashoknagar, BSK Ist Stage, Bangalore-50 in execution of Decree/ Award No.JRD/UBF/566/2005-2006 on the file of the Joint Registrar of the Co-operative Societies [R-441], Karnataka State Co-operative Urban Bank Federation, Hubli Regional Office, Hubli, and has paid the full amount of the purchase money viz. Rs.3350000.00 (Rupees Thirty Three lakhs Fifty Thousand only) by Pay Order No.000683 Dated:17.09.2008 for Rs.27,00,000.00 (Rupees Twenty Seven Lakhs only) drawn on Union Bank of India (ULP), Chandralayout, Bangalore and ICICI Bank Ltd., Chq.No.318425 for Rs.1,45,000.00 (Rupees One Lakhs Forty Five Thousand only) and Balance amount by cash Rs.505000.00 (Rupees five lakhs five thousand only) and the sale has been confirmed by me on 26 day of September, 2008.

Assistant Registrar of Co-operative Societies &
Recovery Officer, 1st Circle, Margosa Road,
Malleshwaram, Bangalore-560003.

**Schedule of the property**

Registration District: Bangalore

Sub-Registration Office : Chamarajpet, Bangalore-18.

| Property Assessment No. | Kind Property | Extent Measurement |
|---|---|---|
| No.32/1 (old No.1343), 5th Cross, Ashoknagar, BSK Ist Stage, Bangalore. | Site with Building | Total measuring 1220 sq.ft.<br>East to West 20 Ft.<br>North to South 61 ft. |

**Bounded by**

**East by:** Property No.1342 **West by:** Property No.1344

**North by:** Property No.1305, **South by:** Road (5th Cross Ashoknagar, Bangalore)

Sale Price: 33,50,000.00 Date of Sale: 07.08.2008

Given under my hand and seal this the 26th day of september, 2008.

Assistant Registrar of Co-operative Societies &
Recovery Officer, 1st Circle, Margosa Road,
Malleshwaram, Bangalore-560003.

**ಫಾರ್ಮ್ ನಂ.11**

**38ನೇ ರೂಲಿನ (7)ನೇ ಕಲಂ**

**ಸ್ಥಿರ ಸ್ವತ್ತುಗಳನ್ನು ಕೊಂಡದ್ದಕ್ಕೆ ಪ್ರಕಟಣೆ**

**ಸಿ.ಇ.ಪಿ.ನಂ.66/07–08**

ಬೆಂಗಳೂರು ನಗರದ 338/ವೈ.9ನೇ ಮುಖ್ಯರಸ್ತೆ, 2ನೇ ಅಡ್ಡರಸ್ತೆ, 7ನೇ ಬ್ಲಾಕ್, ಬನಶಂಕರಿ 3ನೇ ಹಂತದಲ್ಲಿ ವಾಸವಾಗಿರುವ ಶ್ರೀ ಲಲಿತ್‌ರಾಜ್ ಎಂ. ಇವರು ಈ ಕೆಳಗೆ ತೋರಿಸಿದ ಸ್ಥಿರ ಸ್ವತ್ತುಗಳನ್ನು ಬಹಿರಂಗವಾದ ಹರಾಜಿನಲ್ಲಿ 2008ನೇ ಇಸವಿಯ ಆಗಸ್ಟ್ ತಿಂಗಳ 7ನೇ ತಾರೀಖಿನಂದು ಕ್ರಯಕ್ಕೆ ಪಡೆದುಕೊಂಡಿದ್ದಾಗಿಯೂ ಮತ್ತು ದರಖಾಸ್ತು ಹಣ ರೂ.33,50,000/–ಗಳನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಸ್ಥಿರ ಸ್ವತ್ತುಗಳಲ್ಲಿರುವ ಬಾಕಿದಾರನ ಎಲ್ಲಾ ಹಕ್ಕುವ ಪ್ರಯೋಜನಗಳಿಗೆ ಸದರಿ ಶ್ರೀ ಲಲಿತ್‌ರಾಜ್ ಎಂ. ಇವರು ಉತ್ತರಾಧಿಕಾರಿ ಆಗಿದ್ದಾರೆ ಎಂಬುವುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತದೆ.

| ಸ್ಥಿರಸ್ವತ್ತುಗಳ ವಿವರ | ಮುನಿಸಿಪಲ್ ಸಂಖ್ಯೆ/ ಆಸ್ತಿಯ ನಂ. | ಅಂದಾಜು ವಿಸ್ತೀರ್ಣ | ಖಾತೆದಾರನ ಹೆಸರು |
|---|---|---|---|
| ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ವಾರ್ಡ್ ನಂ.51, ಬಸವನಗುಡಿ, 5ನೇ ಅಡ್ಡರಸ್ತೆ, ಅಶೋಕನಗರ, ಬೆಂಗಳೂರು. | ಹೊಸ ನಂ.32/1, ಹಳೆ ನಂ.1343<br>ಹಾಗೂ ಸದರಿ ಆಸ್ಥಿಯಲ್ಲಿ ಇರತಕ್ಕ ಇಮಾರತು ಸಹಿತ | 1220 ಚ.ಅಡಿ (20x61) | ಶ್ರೀ ಲಲಿತ್‌ರಾಜ್ ಎಂ. ಬೆಂಗಳೂರು. |

ಸ್ಥಳ: ಬೆಂಗಳೂರು

ದಿನಾಂಕ:26ನೇ ಸೆಪ್ಟೆಂಬರ್, 2008

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ

ಪಿ.ಆರ್.1209 ವಸೂಲಾಧಿಕಾರಿಗಳು, ಒಂದನೇ ವಲಯ, ಬೆಂಗಳೂರು–560003.

**ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರ ನಡವಳಿಕೆಗಳು**

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರಂ ಹೋಬಳಿ, ನಲ್ಲೂರಹಳ್ಳಿ ಗ್ರಾಮದ ಸ.ನಂ.79ರ ಸರ್ಕಾರಿ ಗೋಮಾಳದ ಜಮೀನಿನಲ್ಲಿ ಸರ್ಕಾರಿ ಪ್ರಾಥಮಿಕ ಪಾಠಶಾಲೆಗೆ ಸಂಪರ್ಕ ರಸ್ತೆ ನಿರ್ಮಾಣ ಮಾಡಲು ಮೆ: ಸನ್‌ರೈನ್ ಇಂಟರ್ ಆಕ್ಟೀವ್ (ಇಂಡಿಯಾ) ಲಿಮಿಟೆಡ್‌ರವರಿಗೆ ಮಂಜೂರಾದ 0–04 ಗುಂಟೆ ಜಮೀನನ್ನು ಕಡಿಮೆ ಮಾಡಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1) ನಲ್ಲೂರಹಳ್ಳಿ ಗ್ರಾಮಸ್ಥರ ಮನವಿ ದಿನಾಂಕ:02.01.2007.

2) ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ:ಸಿಆರ್:352/06–07 ದಿನಾಂಕ:27.02.2006.

3) ಉಪವಿಭಾಗಾಧಿಕಾರಿಗಳವರ ಪತ್ರ ಸಂಖ್ಯೆ: ಎಲ್‌ಎನ್‌ಡಿ:ಸಿಆರ್:552/06–07, ದಿನಾಂಕ:28.02.2007.

4) ಸರ್ಕಾರದ ಪತ್ರ ಸಂಖ್ಯೆ: ಆರ್‌ಡಿ 375 ಎಲ್‌ಜಿಬಿ 2008 ದಿನಾಂಕ:24.05.2008.

**ಪ್ರಸ್ತಾವನೆ:**

ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರಂ ಹೋಬಳಿ, ನಲ್ಲೂರಹಳ್ಳಿ ಗ್ರಾಮದ ಸ.ನಂ.79ರ ಸರ್ಕಾರಿ ಗೋಮಾಳದ ಜಮೀನಿನಲ್ಲಿ ಸರ್ಕಾರಿ ಪ್ರಾಥಮಿಕ ಪಾಠಶಾಲೆ ಕಟ್ಟಡದ ಕಾಮಗಾರಿ ಮುಕ್ತಾಯದ ಹಂತದಲ್ಲಿದ್ದು, ರಸ್ತೆ ಸಂಪರ್ಕ ಇರುವುದಿಲ್ಲವೆಂತಲೂ, ಸಂಪರ್ಕ ರಸ್ತೆ ಕಲ್ಪಿಸಿಕೊಡುವಂತೆ ಉಲ್ಲೇಖ (1)ರ ಮನವಿಯಲ್ಲಿ ಗ್ರಾಮಸ್ಥರು ಕೋರಿರುತ್ತಾರೆ.

ಗ್ರಾಮಸ್ಥರ ಕೋರಿಕೆಯಂತೆ ಮೆ: ಸನ್‌ರೈನ್ ಇಂಟರ್ ಆಕ್ಟೀವ್ (ಇಂಡಿಯಾ) ಲಿಮಿಟೆಡ್ ರವರಿಗೆ ಮಂಜೂರಾಗಿರುವ 14–26 ಎಕರೆ/ಗುಂಟೆ ಜಮೀನಿನ ಪೈಕಿ ಪ್ರಸ್ತಾಪಿತ 0–04 ಗುಂಟೆ ಜಮೀನಿನ ಸ್ಥಳವನ್ನು ಪರಿಶೀಲಿಸಿರುವುದಾಗಿ, ಸದರಿ 0–04 ಗುಂಟೆ ಜಮೀನನ್ನು ಮಂಜೂರಾತಿ ಪ್ರದೇಶದಲ್ಲಿ ಕಡಿಮೆ ಮಾಡಿ ಸಾರ್ವಜನಿಕ ಉದ್ದೇಶಕ್ಕೆ ಮಂಜೂರು ಮಾಡಬಹುದೆಂದು ಉಪವಿಭಾಗಾಧಿಕಾರಿಗಳು ಅಭಿಪ್ರಾಯಪಟ್ಟಿರುತ್ತಾರೆ. ಉಲ್ಲೇಖ (3)ರ ಉಪವಿಭಾಗಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಗಣಿಸಿ, ಮೆ: ಸನ್‌ರೈನ್ ಇಂಟರ್ ಆಕ್ಟೀವ್ (ಇಂಡಿಯಾ) ಲಿಮಿಟೆಡ್‌ರವರಿಗೆ ನಲ್ಲೂರಹಳ್ಳಿ ಸಾಫ್ಟ್‌ವೇರ್ ಅಭಿವೃದ್ಧಿ ಕೇಂದ್ರ ತೆರೆಯಲು ಮಂಜೂರಾದ 16–16 ಎಕರೆ: ಗುಂಟೆ ಪೈಕಿ ಗ್ರಾಮದ ಸ.ನಂ.79ರಲ್ಲಿ ಸಂಪರ್ಕ ರಸ್ತೆಗಾಗಿ 0–04 ಗುಂಟೆ ಜಮೀನನ್ನು ತಗ್ಗಿಸಿ ಕಾಯ್ದಿರಿಸಲು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 13.03.2008ರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಡಿ ಪ್ರಶ್ನಿತ 0–04 ಗುಂಟೆ ಜಮೀನನ್ನು ಸಾರ್ವಜನಿಕ ರಸ್ತೆಗಾಗಿ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಲಾಗಿದೆ.

ಅದರಂತೆ ನಲ್ಲೂರಹಳ್ಳಿ ಗ್ರಾಮದ ಸ.ನಂ.79ರಲ್ಲಿ 0–04 ಗುಂಟೆ ಜಮೀನನ್ನು ಸಂಪರ್ಕ ರಸ್ತೆಗಾಗಿ ಕಾಯ್ದಿರಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ.ಎಲ್ಎನ್‌ಡಿ (ಎಸ್.ಎ.) ಸಿಆರ್:183: 2000–01, ದಿನಾಂಕ:17ನೇ ಜೂನ್, 2008**

ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರಂ ಹೋಬಳಿ, ನಲ್ಲೂರಹಳ್ಳಿ ಗ್ರಾಮದ ಸ.ನಂ.79ರ ಸರ್ಕಾರಿ ಗೋಮಾಳದ ಜಮೀನಿನಲ್ಲಿ ನಲ್ಲೂರಹಳ್ಳಿ ಗ್ರಾಮದ ಸರ್ಕಾರಿ ಕಿರಿಯ ಪ್ರಾಥಮಿಕ ಪಾಠಶಾಲೆಗೆ ಸಂಪರ್ಕ ರಸ್ತೆ ನಿರ್ಮಾಣ ಮಾಡಲು ಮೆ: ಸನ್‌ರೈನ್ ಇಂಟರ್ ಆರ್ಕೈವ್ (ಇಂಡಿಯಾ) ಲಿಮಿಟೆಡ್‌ರವರಿಗೆ ಸಾಫ್ಟ್‌ವೇರ್ ಅಭಿವೃದ್ಧಿ ಕೇಂದ್ರ ತೆರೆಯುವ ಸಲುವಾಗಿ ಮಂಜೂರಾದ 16–16 ಎಕರೆ/ ಗುಂಟೆ ಪೈಕಿ 0–04 ಗುಂಟೆ ವಿಸ್ತೀರ್ಣದ ಜಮೀನನ್ನು ಮಂಜೂರಾತಿಯಿಂದ ಕಡಿಮೆ ಮಾಡಿ ಉಲ್ಲೇಖ (4)ರ ಸರ್ಕಾರದ ಪತ್ರದ ಪೂರ್ವಾನುಮೋದನೆಯಂತೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಡಿ ಕಾಯ್ದಿರಿಸಿ ಆದೇಶಿಸಿದೆ. ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕಂದಾಯ ದಾಖಲೆಗಳಲ್ಲಿ ಸೂಕ್ತವಾಗಿ ನಮೂದಿಸಲು ಸೂಚಿಸಿದೆ.

**ಶಿವಯೋಗಿ ಸಿ. ಕಳಸದ**

ಪಿ.ಆರ್.706 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ತುಮಕೂರು ಜಿಲ್ಲೆ, ಇವರ ಕಛೇರಿಯ ನಡವಳಿಕೆಗಳು**

**ವಿಷಯ:** ಶ್ರೀ ಡಿ. ಗುರುಪ್ರಸಾದ್ ಬಿನ್ ದಾಸಪ್ಪ, ಮಾಜಿ ಕಾರ್ಯದರ್ಶಿ ಶ್ರೀ ತ್ಯಾಗರಾಜ ಪತ್ತಿನ ಸಹಕಾರ ಸಂಘ ನಿ., ಗಾರ್ಡನ್ ರೋಡ್, ತುಮಕೂರು (ಸ್ವಂತ ಊರು ಹೊಸದುರ್ಗ, ವೈ.ಎನ್. ಹೊಸಕೋಟೆ ಹೋಬಳಿ) ಇವರ ಕಾನೂನು ವಾರಸುದಾರರಾದ ತಂದೆ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ದಿನಾಂಕ:04.07.2006 ರಂದು ನಡೆದ ಬಹಿರಂಗ ಹರಾಜು ಮಾರಾಟದಲ್ಲಿ ಬಿಡ್‌ದಾರರು ಬಾರದ ಪ್ರಯುಕ್ತ ಸ್ಥಿರ ಸ್ವತ್ತನ್ನು ಸದರಿ ಸಂಘದ ಹೆಸರಿಗೆ ವರ್ಗಾವಣೆ ಮಾಡುವ ಬಗೆಗೆ.

**ಉಲ್ಲೇಖ:**
1) ಮಾರಾಟಾಧಿಕಾರಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಪ್ರಸ್ತಾವನೆ ಪತ್ರದ ಕ್ರಮಾಂಕ: ಸ.ನಿ.33:ಮಾ.ಅ:17:ಇಪಿ41:2006–07, ದಿನಾಂಕ:19.08.2006.
2) ಈ ಕಛೇರಿಯ ಈ ಕೆಳಕಂಡ ಸಮ ಸಂಖ್ಯೆ: ಪತ್ರದ ದಿನಾಂಕ:11.10.2006.
3) ಕಾರ್ಯದರ್ಶಿ ಶ್ರೀ ತ್ಯಾಗರಾಜ ಪತ್ರಿನ ಸಹಕಾರ ಸಂಘ ನಿ., ತುಮಕೂರು ಇವರ ಪತ್ರದ ಸಂಖ್ಯೆ: ಎಸ್‌ಟಿಪಿಎಸ್‌ಎಸ್:96:2006, ದಿನಾಂಕ:24.11.2006 ಮತ್ತು ಪತ್ರ ನಂ.144:2008, ದಿನಾಂಕ:21.08.2008.
4) ಗೌರವ ಸಿವಿಲ್ ಜಡ್ಜ್ (ಜೂನಿಯರ್ ಡಿವಿಜನ್) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ ಪಾವಗಡದಲ್ಲಿ ಹೂಡಲಾಗಿದ್ದ ದಾವೆ ನಂ. ಓಎಸ್ ನಂ.196/2006ರ ಆದೇಶದ ದಿನಾಂಕ:31.01.2008.

**ಪ್ರಸ್ತಾವನೆ:**

ತುಮಕೂರು ನಗರದಲ್ಲಿರುವ ಶ್ರೀ ತ್ಯಾಗರಾಜ ಪತ್ತಿನ ಸಹಕಾರ ಸಂಘ ನಿ., ಗಾರ್ಡನ್ ರೋಡ್ ತುಮಕೂರು ಸಹಕಾರ ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ನಿಯಮ 1960ರ ಅನ್ವಯ ನೊಂದಾವಣೆಯಾಗಿದ್ದು ನೊಂದಣಿಗೊಂಡ ಉಪನಿಯಮಗಳ ಅನ್ವಯ ಕಾರ್ಯ ನಿರ್ವಹಿಸುತ್ತಿದೆ. ಈ ಸಹಕಾರ ಸಂಘದ ಕಾರ್ಯದರ್ಶಿಯಾಗಿದ್ದ ಶ್ರೀ ಡಿ. ಗುರುಪ್ರಸಾದ್ ಇವರು ಸಂಘದ ಹಣವನ್ನು 2001–02 ನೇ ಸಾಲಿನಲ್ಲಿ ದುರುಪಯೋಗ ಮಾಡಿದ್ದು, ಇವರ ಮೇಲೆ ಅಧಿಭಾರ ಅರ್ಜಿ ಸಂಖ್ಯೆ:1: 2003–04ರ ರೀತ್ಯಾ ದಾವೆಯನ್ನು ಹೂಡಿ ವಿಚಾರಣೆ ನಡೆಸಿ ದಿನಾಂಕ:15.12.2003 ರಂದು ರೂ.721716/– ಗಳನ್ನು ಶೇ.18ರ ಬಡ್ಡಿ ಸೇರಿಸಿ ವಸೂಲಿ ಮಾಡಿಕೊಳ್ಳಲು ಆದೇಶ ನೀಡಿರುತ್ತದೆ. ನಂತರ ಅದು ಅಮಲ್ಜಾರಿ ನಂ.41/2004–05, ದಿನಾಂಕ:24.04.2004ರ ಪ್ರಕಾರ ಸಂಬಂಧಪಟ್ಟ ಪ್ರಾಧಿಕಾರವಾದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ತುಮಕೂರು ಉಪವಿಭಾಗ, ತುಮಕೂರಿನಲ್ಲಿ ದಾಖಲು ಮಾಡಿ ರೂ.10,22,518=76 ಗಳಿಗೆ ಅಮಲ್ಜಾರಿ ಪಡೆಯಲಾಗಿದೆ.

ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿ ಬಾಕಿ ಹಣವು ಸಂಘಕ್ಕೆ ಜಮ ಆಗದೇ ಇದ್ದ ಕಾರಣದಿಂದ ವಸೂಲಿ ಕ್ರಮಕ್ಕಾಗಿ ತೀರ್ಪು ಋಣಿದಾರರು ಈ ಉಪವಿಭಾಗದ ಕಾರ್ಯವ್ಯಾಪ್ತಿಯಲ್ಲಿ ವಾಸವಿದ್ದುದರಿಂದ ಮಧುಗಿರಿ ಉಪವಿಭಾಗಕ್ಕೆ ಈ ಅಮಲ್ಜಾರಿ ಕಡತವನ್ನು ವರ್ಗಾಯಿಸಿರುತ್ತಾರೆ. ಆದುದರಿಂದ ಈ ಕಛೇರಿಯಲ್ಲಿರುವ ಸರ್ಕಾರಿ ಮಾರಾಟಾಧಿಕಾರಿಗಳಿಗೆ ವಸೂಲಿ ಕ್ರಮ ಕೈಗೊಳ್ಳಲು ಈ ಕಡತವನ್ನು ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರು ವಸೂಲಿ ಕ್ರಮದ ಅಡಿಯಲ್ಲಿ ಫಾರಂ

ನಂ.2ರ ನೋಟೀಸ್‌ನ್ನು 6ರ ಫಾರಂನ್ನು ಜಾರಿ ಮಾಡಿಸಿರುತ್ತಾರೆ. ತೀರ್ಪು ಋಣಿದಾರರು ಸ್ವತಃ ಈ ನೋಟೀಸ್‌ಗಳನ್ನು ಸ್ವೀಕರಿಸಿರುತ್ತಾರೆ. ಆಗಲೂ ಅವಾರ್ಡ್ ಮೊತ್ತವನ್ನು ಮರುಪಾವತಿಸಿರುವುದಿಲ್ಲ. ಆಗ ಅವರ ಹಕ್ಕಿಗೆ ಒಳಪಡುವ ಸ್ಥಿರಾಸ್ತಿಯನ್ನು ಫಾರಂ ನಂ.7ರ ಮೂಲಕ ಜಪ್ತಿ ಮಾಡಿ ನೋಟೀಸ್‌ನ್ನು ಮನೆಯ ಬಾಗಿಲಿಗೆ ಅಂಟಿಸುವುದರ ಮೂಲಕ ಜಾರಿಗೊಳಿಸಿ ಸಾಕ್ಷಿ ಸಹಿ ಪಡೆಯಲಾಗಿದೆ. ಆದಾಗ್ಯೂ ದುರುಪಯೋಗದ ಮೊತ್ತವನ್ನು ಮರುಪಾವತಿಸಿರುವುದಿಲ್ಲ. ಆಗ ಈ ಕೆಳಕಂಡ ಷೆಡ್ಯೂಲ್ ಸ್ಥಿರ ಸ್ವತ್ತನ್ನು ದಿನಾಂಕ:14.07.2006 ರಂದು ಬಹಿರಂಗ ಹರಾಜು ಮಾಡಲು ನಿಗದಿಪಡಿಸಿ ಈ ಸಂಬಂಧದ ಫಾರಂ ನಂ.8, 9 ಮತ್ತು ಹರಾಜು ಇಸ್ತಿಹಾರ್‌ಗಳನ್ನು ತೀರ್ಪು ಋಣಿದಾರರಿಗೆ ಜಾರಿಗೊಳಿಸಿರುತ್ತದೆ. ಆದರೆ ಸದರಿ ಬಹಿರಂಗ ಹರಾಜಿನಲ್ಲಿ ಬಿಡ್‌ದಾರರು ಯಾರೂ ಪಾಲ್ಗೊಳ್ಳದೇ ಇದ್ದುದರಿಂದ ಡಿಕ್ರಿ ಬಾಕಿದಾರನ ಹಕ್ಕಿಗೆ ಒಳಪಡುವ ಅವರ ತಂದೆಯ ಹೆಸರಿನಲ್ಲಿರುವ ಸ್ಥಿರ ಸ್ವತ್ತುಗಳನ್ನು ಸಂಘಕ್ಕೆ ಬರಬೇಕಾದ ಅಸಲು, ಬಡ್ಡಿ, ಸುಸ್ತಿ ಬಡ್ಡಿ, ದಾವಾ ಶುಲ್ಕ, ಅಮಲ್ಜಾರಿ ಶುಲ್ಕ ಮತ್ತು ಇತರೆ ಖರ್ಚುಗಳು ಸೇರಿ ಒಟ್ಟು ರೂ.14,33,897/- ಹರಾಜು ದಿನಾಂಕಕ್ಕೆ ಬಾಕಿ ಇರುವುದಾಗಿ ಸಂಘದ ಹಾಲಿ ಕಾರ್ಯದರ್ಶಿಯವರು ಸಲ್ಲಿಸಿರುವ ದೃಢೀಕರಣ ಪತ್ರದಿಂದ ತಿಳಿದು ಬಂದಿದೆ.

ಷೆಡ್ಯೂಲ್‌ನಲ್ಲಿ ತೋರಿಸಿರುವ ಸ್ಥಿರಾಸ್ತಿಗಳನ್ನು ಕಕ್ಷಿದಾರನ ವಾದಿ ಸಂಘಕ್ಕೆ ವರ್ಗಾಯಿಸಲು ವಿವರವಾದ ನೋಟೀಸ್‌ನ್ನು ಉಲ್ಲೇಖ (2)ರ ರೀತ್ಯಾ ನೀಡಲಾಗಿತ್ತು. ಈ ನೋಟೀಸ್‌ನ್ನು ತೀರ್ಪು ಋಣಿದಾರರು ಸ್ವೀಕರಿಸಿರುತ್ತಾರೆ. ಅವರ ತಂದೆ ತಿರಸ್ಕರಿಸಿರುತ್ತಾರೆ. ಆರ್.ಪಿ.ಎ.ಡಿ. ಮೂಲಕ ಕಳುಹಿಸಿದ ಕವರನ್ನು ಕಡತದಲ್ಲಿ ಇಡಲಾಗಿದೆ. ಇಂತಹ ಇದರ ವರ್ಗಾವಣೆ ಬಗ್ಗೆ ವಿರೋಧಿಸಿ ಗೌರವ ಸಿವಿಲ್ ಜಡ್ಜ್ (ಜೂ.ಡಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ ಪಾವಗಡದಲ್ಲಿ ದಾವೆ ಓಎಸ್.ನಂ.196/2006ರ ರೀತ್ಯಾ ತೀರ್ಪುಋಣಿದಾರರ ತಂದೆ ಶ್ರೀ ದಾಸಪ್ಪನವರು ದಾವೆ ಸಲ್ಲಿಸಿದ್ದು, ಅದರ ತೀರ್ಪು ದಿನಾಂಕ:31.01.2008 ರಂದು ಹೊರ ಬಿದ್ದಿರುತ್ತದೆ. ಅದರ ಪ್ರಕಾರ ಆ ದಾವೆ Not Maintainable ಎಂಬುದಾಗಿ ವಜಾಗೊಂಡಿರುತ್ತದೆ. ಆದುದರಿಂದ ಈ ಕಛೇರಿಯ ಮಾರಾಟಾಧಿಕಾರಿಗಳು ಯಾರೂ ಬಿಡ್‌ದಾರರು ಬರಲಿಲ್ಲವಾದ ಕಾರಣದಿಂದ ವಾದಿ ಸಂಘದ ಹೆಸರಿಗೆ ಬಿಡ್ ನಿಲ್ಲಿಸಿರುವುದನ್ನು ಒಪ್ಪಿ ಈ ಕೆಳಕಂಡ ಡಿಕ್ರಿ ಬಾಕಿದಾರನ ಅನ್ವಯ ಭಾಗಶಃ ಸ್ಥಿರ ಸ್ವತ್ತನ್ನು ಡಿಕ್ರಿ ಹೊಂದಿದ ಶ್ರೀ ತ್ಯಾಗರಾಜ ಪತ್ತಿನ ಸಹಕಾರ ಸಂಘ ನಿ., ಗಾರ್ಡನ್ ರೋಡ್, ತುಮಕೂರು ಇದರ ಹೆಸರಿಗೆ ಈ ಕೆಳಕಂಡಂತೆ ವರ್ಗಾವಣೆ ಆದೇಶ ಮಾಡಿ ನೀಡಲಾಗಿದೆ.

**ಆದೇಶ**

**ಸಂಖ್ಯೆ:ಸ.ಸಂ.ಸ.ನಿ.33:ಎ.ಬಿ.ಎನ್.:ಇಎಕ್ಸ್‌ಎನ್:ಸೇಲ್:49: 2006-07, ದಿನಾಂಕ:22ನೇ ಆಗಸ್ಟ್, 2008**

ಶ್ರೀ ಹೆಚ್.ಡಿ. ಶಿವಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101ಬಿ ನ ಕಲಂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ:69: ಸಿ.ಎಲ್.ಎಂ.2001, ದಿನಾಂಕ:21.11.2001ರ ರೀತ್ಯ ನನಗೆ ದತ್ತವಾಗಿದ್ದು, ಇದರ ಪ್ರಕಾರ ಶ್ರೀ ಡಿ. ಗುರುಪ್ರಸಾದ್ ಮಾಜಿ ಕಾರ್ಯದರ್ಶಿ ಇವರ ತಂದೆ (ಕಾನೂನು ವಾರಸುದಾರರು) ದಾಸಪ್ಪ ಬಿನ್ ಕಾಲೇಟಪ್ಪ, ಹೊಸದುರ್ಗ ಗ್ರಾಮ: ಅಂಚೆ, ವೈ.ಎನ್. ಹೊಸಕೋಟೆ ಹೋಬಳಿ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ ಇವರ ಹೆಸರಿನಲ್ಲಿರುವ ಈ ಕೆಳಕಂಡ ಷೆಡ್ಯೂಲ್ ಸ್ಥಿರ ಸ್ವತ್ತನ್ನು ವಾದಿ (ಜಡ್ಜ್‌ಮೆಂಟ್ ಹೋಲ್ಡರ್) ಸಂಘವಾದ ಶ್ರೀ ತ್ಯಾಗರಾಜ ಪತ್ತಿನ ಸಹಕಾರ ಸಂಘ ನಿ., ಗಾರ್ಡನ್ ರಸ್ತೆ, ತುಮಕೂರು ಇದರ ಹೆಸರಿಗೆ ವರ್ಗಾವಣೆ ಆದೇಶ ನೀಡಿರುತ್ತೇನೆ. ಕಾಯಿದೆ ಅನ್ವಯ ನಮೂನೆಗಳನ್ನು ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

ಈ ಆದೇಶವನ್ನು ಕಛೇರಿಯ ಮುದ್ರೆ ಮತ್ತು ನನ್ನ ಸ್ವಹಸ್ತಾಕ್ಷರದ ಸಹಿಯೊಂದಿಗೆ ಈ ದಿನ ದಿನಾಂಕ:22.08.2008ರಂದು ಸ್ವತ್ತನ್ನು ವರ್ಗಾವಣೆ ಮಾಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ವರ್ಗಾವಣೆಗೊಂಡ ಸ್ಥಿರ ಸ್ವತ್ತುಗಳ ವಿವರ**

| ಕ್ರ. ಸಂ. | ಖಾತೆದಾರನ/ ಹಕ್ಕುದಾರನ ಹೆಸರು, ವಿಳಾಸ | ಖಾತೆ ನಂ. | ಸರ್ವೆ ನಂ. | ವಿಸ್ತೀರ್ಣ ಎ-ಗುಂ | ತರಹೆ | ಚೆಕ್ಕುಬಂದಿ |
|---|---|---|---|---|---|---|
| 1. | ದಾಸಪ್ಪ ಬಿನ್ ಕಾರೇಟಪ್ಪ, ಹೊಸದುರ್ಗ ಗ್ರಾಮ, ವೈ.ಎನ್. ಹೊಸಕೋಟೆ ಹೋಬಳಿ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ. | 59 | 118 | 4-20 | ಖುಷ್ಕಿ | ಪೂರ್ವ: ಅಕ್ಕಲಪ್ಪ ಮತ್ತು ವೆಂಕಟೇಶಪ್ಪನವರ ತರಿ ಜಮೀನು. ಪಶ್ಚಿಮ: ಅಕ್ಕಲಪ್ಪನವರ ಖುಷ್ಕಿ ಜಮೀನು ಉತ್ತರ: ವೆಂಕಟೇಶಪ್ಪನವರ ಖುಷ್ಕಿ ಜಮೀನು. ದಕ್ಷಿಣ: ಸರ್ಕಾರಿ ಕೆರೆ. |

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ನಮೂನೆ-8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಬಂಧನೆ-38 ಎ ನೋಡಿ)**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರ ಅನ್ವಯ ಪರಭಾರೆಯ ಬಗ್ಗೆ ಪ್ರಮಾಣ ಪತ್ರ**

ಶ್ರೀ ತ್ಯಾಗರಾಜ ಪತ್ತಿನ ಸಹಕಾರ ಸಂಘ ನಿ., ಗಾರ್ಡನ್ ರೋಡ್, ತುಮಕೂರು ಇದರ ಕಾರ್ಯದರ್ಶಿಯವರು ಪಡೆದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 69ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಡಿ. ಗುರುಪ್ರಸಾದ್ ಬಿನ್ ದಾಸಪ್ಪ ಮಾಜಿ ಕಾರ್ಯದರ್ಶಿ ಶ್ರೀ ತ್ಯಾಗರಾಜ ಪತ್ತಿನ ಸಹಕಾರ ಸಂಘ ನಿ., ಗಾರ್ಡನ್ ರೋಡ್, ತುಮಕೂರು (ಖಾಯಂ ವಿಳಾಸ ಹೊಸದುರ್ಗ, ವೈ.ಎನ್. ಹೊಸಕೋಟೆ, ಪಾವಗಡ ತಾಲ್ಲೂಕು) ಇವರ ಕಾನೂನು ವಾರಸುದಾರರಾದ ತಂದೆ ಹೆಸರಿನಲ್ಲಿದ್ದ ಸ್ಥಿರ ಸ್ವತ್ತುಗಳ ಮಾರಾಟದ ಬಗ್ಗೆ ದಿನಾಂಕ:14.07.2006 ರಂದು ಬಹಿರಂಗ ಹರಾಜು ಇಟ್ಟಿದ್ದು, ಹರಾಜಿನಲ್ಲಿ ಕೊಂಡುಕೊಳ್ಳುವವರು ಯಾರೂ ಬಿಡ್‌ದಾರರು ಬರಲಿಲ್ಲವಾದ್ದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ಮಾರಾಟಾಧಿಕಾರಿಯು ತಿಳಿಸಿರುವುದನ್ನು ನಾನು ಸಮಾಧಾನ ಹೊಂದಿರುತ್ತೇನೆ.

ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಬಾಧ್ಯತೆ ಕೋ_ಆಪರೇಟಿವ್ ಸಂಘ ನಿ., ಗಾರ್ಡ್‌ನ್ ರಸ್ತೆ, ತುಮಕೂರು ಈ ಸಂಘದಲ್ಲಿ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಗಳಿಗೆ ಒಳಪಟ್ಟು ಕೋ-ಆಪರೇಟಿವ್ ಸಂಘ ನಿ., ಗಾರ್ಡನ್ ರಸ್ತೆ, ತುಮಕೂರು ಇದಕ್ಕೆ ಒಪ್ಪಿಸತಕ್ಕದ್ದೆಂದು ಸದರಿ ಅಧಿನಿಯಮದ 101ಬಿ ಪ್ರಕರಣದ ಅನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ವರ್ಗಾವಣೆಗೊಂಡ ಸ್ಥಿರ ಸ್ವತ್ತಿನ ಷೆಡ್ಯೂಲ್ ವಿವರ:**

| ಕ್ರ. ಸಂ. | ಖಾತೆದಾರನ/ ಹಕ್ಕುದಾರನ ಹೆಸರು, ವಿಳಾಸ | ಖಾತೆ ನಂ. | ಸರ್ವೆ ನಂ. | ವಿಸ್ತೀರ್ಣ ಎ-ಗುಂ | ತರಹೆ | ಚೆಕ್ಕುಬಂದಿ |
|---|---|---|---|---|---|---|
| 1. | ದಾಸಪ್ಪ ಬಿನ್ ಕಾರೇಟಪ್ಪ, ಹೊಸದುರ್ಗ ಗ್ರಾಮ, ವೈ.ಎನ್. ಹೊಸಕೋಟೆ ಹೋಬಳಿ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ. | 59 | 118 | 4-20 | ಖುಷ್ಕಿ | ಪೂರ್ವ: ಅಕ್ಕಲಪ್ಪ ಮತ್ತು ವೆಂಕಟೇಶಪ್ಪನವರ ತರಿ ಜಮೀನು. ಪಶ್ಚಿಮ: ಅಕ್ಕಲಪ್ಪನವರ ಖುಷ್ಕಿ ಜಮೀನು ಉತ್ತರ: ವೆಂಕಟೇಶಪ್ಪನವರ ಖುಷ್ಕಿ ಜಮೀನು. ದಕ್ಷಿಣ: ಸರ್ಕಾರಿ ಕೆರೆ. |

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಷರತ್ತು ಮತ್ತು ನಿಯಮಗಳು**

1) ಸಂಘಕ್ಕೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತುಗಳನ್ನು ಸಂಘವೇ ಉಪಯೋಗಿಸತಕ್ಕದ್ದು.

2) ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಗಳ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡತಕ್ಕದ್ದು.

3) ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗಾಗಿ ಮಾರಾಟದ ಹಣವನ್ನು ಸಂಘಕ್ಕೆ ಜಮ-ಖರ್ಚು ಮಾಡಿಕೊಳ್ಳತಕ್ಕದ್ದು.

ದಿನಾಂಕ:22.08.2008

ಸ್ಥಳ: ಮಧುಗಿರಿ

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

ಪಿ.ಆರ್.1018

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆರವರ ಕಛೇರಿ, ನಂ.146, 8ನೇ ಅಡ್ಡರಸ್ತೆ, 3ನೇ ಮುಖ್ಯ ರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03**

**ಕ್ರಮಾಂಕ:ಡಿಆರ್‌ಬಿ-1:ನೋಂದಣಿ ರದ್ಧತಿ:44/2008-09, ದಿನಾಂಕ:31ನೇ ಜುಲೈ, 2008**

**ವಿಷಯ:** ಸಮಾಪನೆಯಲ್ಲಿರುವ ಹಾರೋಕ್ಯಾತನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಾಕಳಿ ಅಂಚೆ, ಬೆಂಗಳೂರು ಉತ್ತರ ತಾಲ್ಲೂಕು, ಇದರ ನೋಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಂಘದ ನೋಂದಣಿ ಕ್ರ.ಸಂ.ಸನಿ-44/ನೋಂದಣಿ/80/31374/ 2002-03 ದಿನಾಂಕ:22.06.2002.

2) ಸಂಘದ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ-1/ಸಮಾಪನೆ/44/2007-08, ದಿನಾಂಕ:19.11.2007.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ವರದಿ ಸಂಖ್ಯೆ: ಸನಿಬೆಂ–44: ನೋಂದಣಿ ರದ್ಧತಿ/35/2007–08 ದಿನಾಂಕ:28.02.2008.
4) ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–1, ಸಹಾಯಕ ನಿಬಂಧಕರ ಕಛೇರಿ, 1ನೇ ವಲಯ, ಇವರ ವರದಿ ದಿನಾಂಕ:19.06.2008.

**ಪ್ರಸ್ತಾವನೆ:**

ಹಾರೋಕ್ಯಾತನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಾಕಳಿ ಅಂಚೆ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ ಈ ಸಂಘವನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರುರವರು ನೋಂದಣಿ ಸಂಖ್ಯೆ: ಸನಿ–44/ ನೋಂದಣಿ/31374/ 2002–03 ರಂತೆ ದಿನಾಂಕ:22.06.2002 ರಂದು ನೋಂದಣಿ ಮಾಡಲಾಗಿತ್ತು. ಈ ಸಂಘಕ್ಕೆ ಹಾಲು ಶೇಖರಣೆಯು ತುಂಬಾ ಕಡಿಮೆಯಾಗಿದ್ದು, ಪ್ರತಿದಿನ ಕೇವಲ 30 ಲೀಟರ್ ಹಾಲು ಮಾತ್ರ ಸಂಗ್ರಹಣೆಯಾಗುತ್ತಿದ್ದು, ಹಾಲಿನ ಗುಣಮಟ್ಟವು ಸಹ ತೀರಾ ಕಳಪೆ ಮಟ್ಟದ್ದಾಗಿದ್ದು, ಸಂಘವು ಸತತವಾಗಿ ನಷ್ಟ ಅನುಭವಿಸುತ್ತಾ 2004–05ನೇ ಲೆಕ್ಕಪರಿಶೋಧನಾ ವರದಿಯ ಪ್ರಕಾರ ರೂ.5180–70 ಗಳಷ್ಟು ನಷ್ಟ ಅನುಭವಿಸಿದ ಹಿನ್ನೆಲೆಯಲ್ಲಿ ಸಂಘದವರು ದಿನಾಂಕ:01.11.2006 ರಿಂದ ಹಾಲು ಶೇಖರಣೆಯನ್ನು ಸ್ಥಗಿತಗೊಳಿಸುವಂತೆ ಲಿಖಿತ ಮನವಿಯನ್ನು ನೀಡಿದ್ದು, ಈ ಮನವಿಯ ಮೇರೆಗೆ ಉಪವ್ಯವಸ್ಥಾಪಕರು, ಬಮೂಲ್, ಯಲಹಂಕರವರು ಸ್ಥಳಪರಿಶೀಲನೆ ನಡೆಸಿ ಸಂಘದ ಸದಸ್ಯರೊಂದಿಗೆ ಚರ್ಚಿಸಿ ಸಂಘವನ್ನು ಪ್ರಾರಂಭಿಸಲು ಸದಸ್ಯರುಗಳಿಗೆ ಆಸಕ್ತಿಯಿಲ್ಲವೆಂದು ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರುರವರಿಗೆ ವರದಿ ಸಲ್ಲಿಸಿದ್ದು, ಈ ವರದಿಯನ್ನು ಆಧರಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯ ಬೆಂಗಳೂರು ಇವರು ದಿನಾಂಕ:20.09.2007ರಂದು ಸದರಿ ಸಂಘವನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿದ್ದರು. ಸದರಿ ಪ್ರಸ್ತಾವನೆಯ ಮೇರೆಗೆ ಉಲ್ಲೇಖ (2)ರ ಈ ಕಛೇರಿಯ ಆದೇಶದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಿ ಶ್ರೀ ಟಿ.ಜಯಶೇಖರ್, ಸಹಕಾರ ಸಂಘಗಳ ನಿರೀಕ್ಷಕರು (ದಕ್ಷಿಣ–1) ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕಾತಿ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಪ್ರಸಕ್ತ ಉಲ್ಲೇಖ (3)ರಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಉಲ್ಲೇಖ (4)ರಂತೆ ಸಹಕಾರ ಸಂಘಗಳ ನಿರೀಕ್ಷಕರು ದಕ್ಷಿಣ–1 ರವರು ವರದಿಯನ್ನು ಸಲ್ಲಿಸಿ, ಸದರಿ ವರದಿಯೊಂದಿಗೆ ದಿನಾಂಕ:20.02.2008ರಂದು ನಡೆಸಿದ ಸಭೆಯ ನಡವಳಿಕೆಯನ್ನು ಲಗತ್ತಿಸಿರುತ್ತಾರೆ. ಸದರಿ ನಡವಳಿಕೆಯನ್ನು ಪರಿಶೀಲಿಸಲಾಗಿ, ಸಮಾಪನಾಧಿಕಾರಿಯವರು ಸಂಘವು ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲಾ ಸಹಕಾರ ಹಾಲು ಒಕ್ಕೂಟದಲ್ಲಿ ಹೊಂದಿದ್ದ ಷೇರು ಸರ್ಟಿಫಿಕೇಟ್‌ನ್ನು ಹಿಂದಿರುಗಿಸಿ ಇದರ ಬಾಬ್ತು ರೂ.1000/– ಗಳನ್ನು ಸಹಕಾರ ಅಭಿವೃದ್ಧಿ ನಿಧಿ ಖಾತೆ ಸಂಖ್ಯೆ:9368 ಕ್ಕೆ ವರ್ಗಾಯಿಸಲು ತಿಳಿಸಿರುವುದಾಗಿ ಹಾಗೂ ಸಂಘವು ಬಿ.ಡಿ.ಸಿ.ಸಿ. ಬ್ಯಾಂಕ್ ಯಶವಂತಪುರ ಶಾಖೆಯಲ್ಲಿ ಹೊಂದಿದ್ದ ಉಳಿತಾಯ ಖಾತೆ ಸಂಖ್ಯೆ:626 ರಲ್ಲಿದ್ದ ರೂ.1779–00 ಗಳನ್ನು ಸಹಕಾರ ಅಭಿವೃದ್ಧಿ ನಿಧಿ ಖಾತೆ ಸಂಖ್ಯೆ:9368ಕ್ಕೆ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ಚಲನ್ ಮೂಲಕ ದಿನಾಂಕ:18.06.2008 ರಂದು ಪಾವತಿಸಿರುವುದು ಕಂಡುಬರುತ್ತದೆ. ಈ ಸಂಘದ ಆಸ್ತಿ ಜವಾಬ್ದಾರಿಗಳನ್ನು ಸಮಾಪನಾಧಿಕಾರಿಯವರು ಶೂನ್ಯಗೊಳಿಸಿರುವುದರಿಂದ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರವರು ಉಲ್ಲೇಖ (3)ರಂದು ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುವುದರಿಂದ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ರದ್ದುಪಡಿಸುವುದು ಸೂಕ್ತವೆಂದು ಮನವರಿಕೆಯಾಗಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಎಂ. ವೆಂಕಟಸ್ವಾಮಿ, ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರವನ್ನು ಚಲಾಯಿಸಿ, ಹಾರೋಕ್ಯಾತನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಾಕಳಿ ಅಂಚೆ, ಬೆಂಗಳೂರು ಉತ್ತರ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶಿಸಿದ್ದೇನೆ. ಈ ದಿನದಿಂದ ಈ ಸಂಘವು ಕಾರ್ಪೊರೇಟ್ ಬಾಡಿಯಾಗಿರುವ ಅಸ್ಥಿತ್ವವನ್ನು ಕಳೆದುಕೊಂಡಿರುತ್ತದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ:31.07.2008ರಂದು ನೀಡಲಾಗಿದೆ.

**ಎಂ. ವೆಂಕಟಸ್ವಾಮಿ**
ಸಹಕಾರ ಸಂಘಗಳ ಉಪ ನಿಬಂಧಕರು–1,
ಬೆಂಗಳೂರು ನಗರ ಜಿಲ್ಲೆ.

ಪಿ.ಆರ್.1186

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಸಿಆಸುಇ 214 ಆಸೇಇ 08, ಬೆಂಗಳೂರು, ದಿನಾಂಕ:20ನೇ ಜೂನ್, 2008**

2006ನೇ ತಂಡದಲ್ಲಿ ಕರ್ನಾಟಕ ಆಡಳಿತ ಸೇವಾ ಸಮೂಹ–ಎ (ಕಿರಿಯ ಶ್ರೇಣಿ) ಪರೀಕ್ಷಾರ್ಥಿಗಳಾಗಿ ನೇಮಕಗೊಂಡಿರುವ ಈ ಕೆಳಕಂಡ ಅಭ್ಯರ್ಥಿಗಳು ಪರೀಕ್ಷಾರ್ಥ ತರಬೇತಿಯನ್ನು ಪಡೆಯಲು ಅವರುಗಳ ಹೆಸರುಗಳ ಮುಂದೆ ಸೂಚಿಸಿರುವ ಜಿಲ್ಲೆಗಳಿಗೆ ನೇಮಿಸಲಾಗಿದೆ.

| ಕ್ರ. ಸಂ. | ಪರೀಕ್ಷಾರ್ಥಿಯ ಹೆಸರು ಶ್ರೀ/ಶ್ರೀಮತಿ | ತರಬೇತಿಗೆ ನಿಯೋಜಿಸಲ್ಪಟ್ಟಿರುವ ಜಿಲ್ಲೆಯ ಹೆಸರು |
|---|---|---|
| 1. | ಸುರೇಶ್ ಬಿ. ಇಟ್ನಾಳ್ | ಹಾಸನ ಜಿಲ್ಲೆ |
| 2. | ಪ್ರಭು ಜಿ. | ತುಮಕೂರು ಜಿಲ್ಲೆ |
| 3. | ಅನುರಾಧ ಕೆ.ಎನ್. | ಮಂಡ್ಯ ಜಿಲ್ಲೆ |
| 4. | ನಾಗರಾಜ ಎನ್.ಎಂ. | ಚಿತ್ರದುರ್ಗ ಜಿಲ್ಲೆ |
| 5. | ರೂಪ ಐ.ಪಿ. | ಮೈಸೂರು ಜಿಲ್ಲೆ |
| 6. | ನವೀನ್‌ಕುಮಾರ್ ರಾಜು ಎಸ್. | ಉತ್ತರ ಕನ್ನಡ ಜಿಲ್ಲೆ |

ಮೇಲ್ಕಂಡ ಪರೀಕ್ಷಾರ್ಥಿಗಳು ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವ ತರಬೇತಿಗಾಗಿ ಅವರುಗಳನ್ನು ನಿಯೋಜಿಸಲ್ಪಟ್ಟಿರುವ ಜಿಲ್ಲೆಯ ಕೇಂದ್ರಸ್ಥಾನದಲ್ಲಿ ಜಿಲ್ಲಾಧಿಕಾರಿಗಳ ಸಕ್ಷಮ ದಿನಾಂಕ:23.06.2008ರಂದು ಪೂರ್ವಾಹ್ನ ಹಾಜರಾಗತಕ್ಕದ್ದು.

ಪರೀಕ್ಷಾರ್ಥಿ ಅವಧಿಯಲ್ಲಿ ಪರೀಕ್ಷಾರ್ಥಿಗಳು ಅವರ ವೇತನ ಮತ್ತು ಭತ್ಯೆಗಳನ್ನು ಮಹಾಲೇಖಪಾಲರು ನೀಡುವ ವೇತನ ಪಟ್ಟಿಯ ಆಧಾರದ ಮೇಲೆ ಪಡೆಯುವುದು.

ಮೇಲ್ಕಂಡ ಪರೀಕ್ಷಾರ್ಥಿಗಳನ್ನು ಭೂಮಾಪನ ಮತ್ತು ಕಂದಾಯ ನಿರ್ಣಯ ಸಂಸ್ಥೆ, ಮೈಸೂರು ಇಲ್ಲಿ ತರಬೇತಿ ಪಡೆದ ನಂತರ ಮೇಲ್ಕಂಡ ಜಿಲ್ಲೆಗಳಲ್ಲಿಯೇ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

ಪರೀಕ್ಷಾರ್ಥಿಗಳು ಪಡೆದ ತರಬೇತಿಯ ವರದಿಯನ್ನು ಪ್ರತಿ ತಿಂಗಳ 10ನೇ ತಾರೀಖಿನೊಳಗೆ ಸರ್ಕಾರಕ್ಕೆ ಸಲ್ಲಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

## ಅನುಬಂಧ

**2006ನೇ ತಂಡದ ಕರ್ನಾಟಕ ಆಡಳಿತ ಸೇವಾ ಕಿರಿಯ ಶ್ರೇಣಿ ಪರೀಕ್ಷಾರ್ಥಿಗಳಿಗೆ ದಿನಾಂಕ:23.06.2008 ರಿಂದ 31.10.2008 ರವರೆಗೆ ತರಬೇತಿ ಕಾರ್ಯಕ್ರಮದ ವಿವರ**

**FUNCTIONAL OR FIELD TRAINING: (17 WEEKS)**

| ಕ್ರ. ಸಂ. | ತರಬೇತಿಗೆ ನಿಯೋಜಿಸಿರುವ ಕಛೇರಿ | ಅವಧಿ | ದಿನಾಂಕ |
|---|---|---|---|
| 1. | ಜಿಲ್ಲಾಧಿಕಾರಿಗಳ ಕಛೇರಿ | 3 ವಾರ | 23.06.08 – 09.07.08 |
| 2. | ಗ್ರಾಮಲೆಕ್ಕಿಗ, ಪಂಚಾಯತ್ ಕಾರ್ಯದರ್ಶಿಯವರ ಕಛೇರಿ. | 2 ವಾರ | 10.07.08 – 23.07.08 |
| 3. | ಕಂದಾಯ ನಿರೀಕ್ಷಕರ ಕಛೇರಿ | 2 ವಾರ | 24.07.08 – 06.08.08 |
| 4. | ತಾಲ್ಲೂಕು ಕಛೇರಿ | 4 ವಾರ | 07.08.08 – 04.09.08 |
| 5. | ಉಪವಿಭಾಗಾಧಿಕಾರಿಗಳ ಕಛೇರಿ | 1 ವಾರ | 05.09.08 – 11.09.08 |
| 6. | ಜಿಲ್ಲಾ ಪೊಲೀಸ್ ಕಛೇರಿ | 1 ವಾರ | 12.09.08 – 18.09.08 |
| 7. | ಜುಡಿಷಿಯಲ್ ಕೋರ್ಟ್ಸ್ | 1 ವಾರ | 19.09.08 – 25.09.08 |
| 8. | ಇತರೆ ಜಿಲ್ಲಾ ಕಛೇರಿಗಳು<br>1) ಸಹಕಾರ ಇಲಾಖೆ<br>2) ವಾಣಿಜ್ಯ ತೆರಿಗೆ ಇಲಾಖೆ<br>3) ಖಜಾನೆ ಇಲಾಖೆ<br>4) ಉಪನೊಂದಣಾಧಿಕಾರಿ ಕಛೇರಿ<br>5) ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ | 1 ವಾರ | 26.09.08 – 01.10.08 |

| ಕ್ರ. ಸಂ. | ತರಬೇತಿಗೆ ನಿಯೋಜಿಸಿರುವ ಕಛೇರಿ | ಅವಧಿ | ದಿನಾಂಕ |
|---|---|---|---|
| 9. | ಮಹಾನಗರ ಪಾಲಿಕೆ/ ನಗರಸಭೆ ಕಛೇರಿ | 1 ವಾರ | 03.10.08 – 09.10.08 |
| 10. | ಪ್ರಾದೇಶಿಕ ಆಯುಕ್ತರ ಕಛೇರಿ | 1 ವಾರ | 10.10.08 – 16.10.08 |

**ZILLA PANCHAYATHS (2 WEEKS)**

| ಕ್ರ. ಸಂ. | ತರಬೇತಿಗೆ ನಿಯೋಜಿಸಿರುವ ಕಛೇರಿ | ಅವಧಿ | ದಿನಾಂಕ |
|---|---|---|---|
| 1. | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ | 2 ವಾರ | 17.10.08 – 31.10.08 |

**SURVEY SETTLEMENT & LAND RECORDS TRAINING: (4 WEEKS)**

| ಕ್ರ. ಸಂ. | ತರಬೇತಿಗೆ ನಿಯೋಜಿಸಿರುವ ಕಛೇರಿ | ಅವಧಿ | ದಿನಾಂಕ |
|---|---|---|---|
| 1. | ಭೂಮಾಪನ ಮತ್ತು ಕಂದಾಯ ನಿರ್ಣಯ ತರಬೇತಿ ಸಂಸ್ಥೆ, ಮೈಸೂರು. | 4 ವಾರ | 03.11.08 – 29.11.08 |

**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

ಪಿ.ಆರ್.729

## ಉಪನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

## ಅಧಿಕೃತ ಜ್ಞಾಪನ

**ಸಂಖ್ಯೆ: ಎ5(ಜಿ4) ದೂರು.ತೀತಾ:17:2005–06, ದಿನಾಂಕ:7ನೇ ಅಕ್ಟೋಬರ್, 2008**

**ವಿಷಯ:** ಶ್ರೀ ಕೆ.ಪಿ. ತಿಮ್ಮಪ್ಪಗೌಡ, ಸಹ ಶಿಕ್ಷಕ, ಸರ್ಕಾರಿ ಹಿಪ್ರಾಶಾಲೆ, ಮಲ್ಲೇಸರ ತೀರ್ಥಹಳ್ಳಿ ತಾಲ್ಲೂಕು ಇವರು ಕ್ರಿಮಿನಲ್ ಮೊಕದ್ದಮೆಯಲ್ಲಿ ಒಳಗಾಗಿ ಕಾರಾಗೃಹ ಶಿಕ್ಷೆ ಅನುಭವಿಸಿ ದಿನಾಂಕ:20.10.2004 ರಿಂದ 27.09.2005ರ ವರೆಗೆ ಸೇವೆಗೆ ಅನಧಿಕೃತ ಗೈರು ಹಾಜರಾದ ಆರೋಪದ ಮೇಲೆ ಸೇವೆಯಿಂದ ವಜಾಗೊಳಿಸುವ ಕುರಿತು.

**ಉಲ್ಲೇಖ:**
1) ಕ್ಷೇತ್ರ ಶಿಕ್ಷಣಾಧಿಕಾರಿ, ತೀರ್ಥಹಳ್ಳಿ ಇವರ ಪತ್ರ ಸಂಖ್ಯೆ:ಎ1.ದೂರು.75:2004–05 ದಿನಾಂಕ:18.06.2005.
2) ಈ ಕಛೇರಿಯ ಜ್ಞಾಪನ ಪತ್ರದ ಸಮ ಸಂಖ್ಯೆ: ದಿನಾಂಕ:20.07.2008
3) ಕ್ಷೇತ್ರ ಶಿಕ್ಷಣಾಧಿಕಾರಿ, ತೀರ್ಥಹಳ್ಳಿ ಇವರ ಪತ್ರ ಸಂಖ್ಯೆ:ಎ1.ದೂರು.75:2004–05, ದಿನಾಂಕ:14.09.2005.
4) ಕ್ಷೇತ್ರ ಶಿಕ್ಷಣಾಧಿಕಾರಿ, ತೀರ್ಥಹಳ್ಳಿ ಇವರ ಪತ್ರ ಸಂಖ್ಯೆ:ಎ1. ದೂರು.75:2004–05 ದಿನಾಂಕ:05.10.2005.
5) ಈ ಕಛೇರಿಯ ಪತ್ರದ ಸಮ ಸಂಖ್ಯೆ: ದಿನಾಂಕ:28.10.2005.
6) ನಿರ್ದೇಶಕರು, ಪ್ರಾಥಮಿಕ ಶಿಕ್ಷಣ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿ3(2) ಪ್ರಾಶಿ.ಹಾ.ದೂರು:74:2005–06 ದಿನಾಂಕ:–02.12.2005.
7) ಈ ಕಛೇರಿಯ ಜ್ಞಾಪನದ ಸಮ ಸಂಖ್ಯೆ ದಿನಾಂಕ:13.01.2006.
8) ಕ್ಷೇತ್ರ ಶಿಕ್ಷಣಾಧಿಕಾರಿ, ತೀರ್ಥಹಳ್ಳಿ ಇವರ ಪತ್ರಸಂಖ್ಯೆ: ಎ1.ಅ.ಗೈಹಾ.ದೂರು:75:2005–06, ದಿನಾಂಕ:17.01.2006.
9) ಶ್ರೀ ತಿಪ್ಪಪ್ಪಗೌಡ ಕೆ.ಪಿ. ಸಹ ಶಿಕ್ಷಕ, ಸರ್ಕಾರಿ ಹಿಪ್ರಾಶಾಲೆ, ಮಲ್ಲೇಸರ ಇವರ ಪತ್ರ ದಿನಾಂಕ:15.03.2007.
10) ಈ ಕಛೇರಿಯ ಕಾರಣ ಕೇಳುವ ನೋಟೀಸು ಸಮ ಸಂಖ್ಯೆ: ದಿನಾಂಕ:09.05.2007.
11) ಈ ಕಛೇರಿಯ ತಿಳುವಳಿಕೆ ಪತ್ರದ ಸಮಸಂಖ್ಯೆ: ದಿನಾಂಕ:15.04.2008.
12) ಶ್ರೀ ತಿಮ್ಮಪ್ಪಗೌಡ ಕೆ.ಪಿ. ಸಹ ಶಿಕ್ಷಕ, ಸರ್ಕಾರಿ ಹಿಪ್ರಾಶಾಲೆ, ಮಲ್ಲೇಸರ ಇವರ ಪತ್ರ ದಿನಾಂಕ:12.05.2008.

13) ಶ್ರೀ ತಿಪ್ಪಪ್ಪಗೌಡ ಕೆ.ಪಿ. ಸಹ ಶಿಕ್ಷಕ, ಸರ್ಕಾರಿ ಹಿಪ್ರಾಶಾಲೆ, ಮಲ್ಲೇಸರ ಇವರ ಪತ್ರ ದಿನಾಂಕ:02.06.2008.

14) ಈ ಕಛೇರಿಯ ಜ್ಞಾಪನದ ಸಮಸಂಖ್ಯೆ: ದಿನಾಂಕ:24.07.2008.

15) ಕ್ಷೇತ್ರ ಶಿಕ್ಷಣಾಧಿಕಾರಿ, ತೀರ್ಥಹಳ್ಳಿ ಇವರ ಪತ್ರ ಸಂಖ್ಯೆ:ಎ9(ಎ1) ದೂರು. ಅ.ಗೈಹಾ.75:2004-05, ದಿನಾಂಕ:14.08.2008.

**ಪ್ರಸ್ತಾವನೆ:**

ಶ್ರೀ ತಿಮ್ಮಪ್ಪಗೌಡ, ಸಹ ಶಿಕ್ಷಕ ಸರ್ಕಾರಿ ಹಿಪ್ರಾಶಾಲೆ, ಮಲ್ಲೇಸರ, ತೀರ್ಥಹಳ್ಳಿ ತಾ: ಇವರು ದಿನಾಂಕ:20.10.2004 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದಾಗಿ ಉಲ್ಲೇಖದ 1 ರ ಪತ್ರದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿ, ತೀರ್ಥಹಳ್ಳಿ ಇವರು ವರದಿ ಸಲ್ಲಿಸಿರುತ್ತಾರೆ. ಸದರಿ ಶಿಕ್ಷಕರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ನೊಂದಣಿ ಅಂಚೆ ಮೂಲಕ ತಿಳುವಳಿಕೆ ನೀಡಿದ ಪತ್ರವು ಸದರಿ ಶಿಕ್ಷಕರು ವಾಸದ ವಿಳಾಸದಲ್ಲಿ ಇರುವುದಿಲ್ಲವೆಂದು ದಾಖಲಿಸಿ ಹಿಂತಿರುಗಿ ಬಂದಿರುವುದಾಗಿ ತಿಳಿಸಿರುತ್ತಾರೆ.

ಕ್ಷೇತ್ರ ಶಿಕ್ಷಣಾಧಿಕಾರಿ, ತೀರ್ಥಹಳ್ಳಿ ಇವರು ಸದರಿ ಶಿಕ್ಷಕರು ಅನಧಿಕೃತ ಗೈರು ಹಾಜರಾಗಿರುವುದಾಗಿ ಸಲ್ಲಿಸಿದ ವರದಿ ಆಧರಿಸಿ, ಕರ್ತವ್ಯಕ್ಕೆ ಹಾಜರಾಗುವಂತೆ ಉಲ್ಲೇಖ 2ರ ಈ ಕಛೇರಿಯ ಜ್ಞಾಪನ ಪತ್ರದಲ್ಲಿ ನೊಂದಣಿ ಅಂಚೆ ಮೂಲಕ ತಿಳುವಳಿಕೆ ನೀಡಿದ್ದು, ಸದರಿ ತಿಳುವಳಿಕೆ ಪತ್ರವು ಸ್ವೀಕೃತವಾಗದೆ ಹಿಂತಿರುಗಿರುತ್ತದೆ.

ಶಿಕ್ಷಣ ಸಂಯೋಜಕರು ಸಲ್ಲಿಸಿರುವ ಮಹಜರ್ ವರದಿಯಂತೆ ಸದರಿ ಶಿಕ್ಷಕರು ವಾಸಸ್ಥಳದಲ್ಲಿ ಇರುವುದಿಲ್ಲ ಎಂಬುದಾಗಿ ಉಲ್ಲೇಖ 3 ರ ಪತ್ರದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಪುನಃ ವರದಿ ಸಲ್ಲಿಸಿರುತ್ತಾರೆ.

ಸದರಿ ಶಿಕ್ಷಕರು ದಿನಾಂಕ:18.10.2004 ರಿಂದ ದಿನಾಂಕ:23.09.2005 ರವರೆಗೆ ನ್ಯಾಯಾಂಗ ಬಂಧನದಲ್ಲಿದ್ದು, ಸರ್ವೋಚ್ಚ ನ್ಯಾಯಾಲಯದ ಜಾಮೀನಿನ ಮೇಲೆ ಬಿಡುಗಡೆ ಹೊಂದಿರುವುದಾಗಿ ತಿಳಿಸಿ ದಿನಾಂಕ:27.09.2005 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಗೆ ಖುದ್ದಾಗಿ ಹಾಜರಾಗಿ ಕರ್ತವ್ಯಕ್ಕೆ ಅನುಮತಿ ನೀಡಲು ಕೋರಿರುವುದಾಗಿ ತಿಳಿಸಿ ಮನವಿ ಪತ್ರವನ್ನು ಉಲ್ಲೇಖ 4ರ ಪತ್ರದಲ್ಲಿ ಈ ಕಛೇರಿಗೆ ಸಲ್ಲಿಸಿರುತ್ತಾರೆ. ಈ ಅವಧಿಯಲ್ಲಿ ಸೆರೆವಾಸ ಅನುಭವಿಸಲು ಸದರಿ ಶಿಕ್ಷಕರು ನೇಮಕಾತಿ ಪ್ರಾಧಿಕಾರ ಹಾಗೂ ಇಲಾಖೆಯ ಯಾವುದೇ ಅಧಿಕಾರಿಗಳ ಪೂರ್ವಾನುಮತಿ ಪಡೆದಿರುವುದಿಲ್ಲ.

ಸದರಿ ಶಿಕ್ಷಕರು ಅನಧಿಕೃತ ಗೈರು ಹಾಜರಾಗಿರುವ ವಿಷಯವನ್ನು ಹಾಗೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಒಳಗಾಗಿ ಜೈಲು ಶಿಕ್ಷೆ ಅನುಭವಿಸಿ ಜಾಮೀನಿನ ಮೇಲೆ ಬಿಡುಗಡೆ ಹೊಂದಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ಕೋರಿರುವ ವಿಷಯದ ಬಗ್ಗೆ ಸವಿವರವಾದ ವರದಿ ಸಲ್ಲಿಸಿ ಕೈಗೊಳ್ಳಬೇಕಾದ ಕ್ರಮದ ಬಗ್ಗೆ ಮಾರ್ಗದರ್ಶನ ನೀಡುವಂತೆ ಉಲ್ಲೇಖದ 5ರ ಪತ್ರದಲ್ಲಿ ಮಾನ್ಯ ನಿರ್ದೇಶಕರು, ಪ್ರಾಥಮಿಕ ಶಿಕ್ಷಣ, ಸಾಶಿಇ, ಬೆಂಗಳೂರು ಇವರನ್ನು ಕೋರಲಾಗಿತ್ತು.

ಸದರಿ ಅನಧಿಕೃತ ಗೈರು ಹಾಜರಾಗಿರುವ ಶಿಕ್ಷಕರ ಮೇಲೆ ನಿಯಮಾನುಸಾರ ಕ್ರಮ ಜರುಗಿಸಿ ಸೇವೆಯಿಂದ ತೆಗೆದು ಹಾಕದೇ ಇದ್ದಲ್ಲಿ ಕರ್ತವ್ಯಕ್ಕೆ ಹಾಜರುಪಡಿಸಿಕೊಂಡು ಕೆಸಿಎಸ್‌ಆರ್ ನಿಯಮ 108ರ ಪ್ರಕಾರ ಸಿಸಿಎ ನಲ್ಲಿನ ವಿಧಾನವನ್ನು ಅನುಸರಿಸಿ ಸೂಕ್ತಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಕರು, ಪ್ರಾಥಮಿಕ ಶಿಕ್ಷಣ, ಸಾಶಿಇ, ಬೆಂಗಳೂರು ಇವರು ಉಲ್ಲೇಖ 6ರ ಪತ್ರದಲ್ಲಿ ಮಾರ್ಗದರ್ಶನ ನೀಡಿರುತ್ತಾರೆ.

ಅದರಂತೆ ಸದರಿ ಶಿಕ್ಷಕರನ್ನು ಸೇವೆಗೆ ತೆಗೆದುಕೊಂಡು ಕೆಸಿಎಸ್‌ಆರ್ ನಿಯಮ 108ರ ಪ್ರಕಾರ ಸಿಸಿಎ ನಿಯಮದನ್ವಯ ವಿಧಾನ ಅನುಸರಿಸಿ ಸೂಕ್ತ ಕ್ರಮ ಕೈಗೊಳ್ಳಲು ಪ್ರಸ್ತಾವನೆ ಸಲ್ಲಿಸುವಂತೆ ಉಲ್ಲೇಖ 7ರ ಪತ್ರದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ತಿಳಿಸಲಾಗಿರುತ್ತದೆ.

ಸದರಿ ಶಿಕ್ಷಕರು ಕರ್ತವ್ಯಕ್ಕೆ ಗೈರು ಹಾಜರಾಗಿದ್ದು, ಸದರಿ ಶಿಕ್ಷಕರಿಗೆ ಕರ್ತವ್ಯಕ್ಕೆ ಹಾಜರಾಗಲು ತಿಳುವಳಿಕೆ ನೀಡಿರುವ ಹಾಗೂ ಸದರಿ ಶಿಕ್ಷಕರು ದಿನಾಂಕ:20.10.2004 ರಿಂದ ದಿನಾಂಕ:23.09.2005 ರವರೆಗೆ ಕಾರಾಗೃಹದಲ್ಲಿದ್ದು, ಇಲಾಖೆಗೆ ತಿಳಿಸಲು ಸಾಧ್ಯವಾಗಿರುವುದಿಲ್ಲ ಎಂಬ ವಿಷಯವನ್ನು ಖುದ್ದು ಶಿಕ್ಷಕರೇ ಒಪ್ಪಿಕೊಂಡಿರುವುದಾಗಿ ತಿಳಿಸಿ ನಿಯಮಾನುಸಾರ ಕ್ರಮ ಜರುಗಿಸುವ ಬಗ್ಗೆ ಕ್ಷೇತ್ರ ಶಿಕ್ಷಣಾಧಿಕಾರಿ, ತೀರ್ಥಹಳ್ಳಿ ಇವರು ಉಲ್ಲೇಖ 8ರ ಪತ್ರದಲ್ಲಿ ವರದಿ ಸಲ್ಲಿಸಿರುತ್ತಾರೆ.

ಸದರಿ ಶಿಕ್ಷಕರು ಉಲ್ಲೇಖ 9ರ ಪತ್ರದಲ್ಲಿ ವಿವರಣೆ ಸಲ್ಲಿಸಿ ಸದರಿ ಶಿಕ್ಷಕರು ದಿನಾಂಕ:18.10.2004 ರಿಂದ ದಿನಾಂಕ:23.09.2004 ರವರೆಗೆ 11 ತಿಂಗಳ ಕಾಲ ಕೇಂದ್ರ ಕಾರಾಗೃಹ ಬೆಂಗಳೂರು ಇಲ್ಲಿ ನ್ಯಾಯಾಂಗ ಬಂಧನದಲ್ಲಿದ್ದು, ನಂತರ ಸುಪ್ರೀಂ ಕೋರ್ಟ್ ಜಾಮೀನು ಆದೇಶದ ಮೇಲೆ ಬಿಡುಗಡೆ ಹೊಂದಿರುವುದಾಗಿ ತಿಳಿಸಿ, ಸದರಿಯವರ ಮೇಲೆ ಕ್ರಿಮಿನಲ್ ಪ್ರಕರಣದ ವಿಚಾರಣೆ ಸುಪ್ರೀಂ ಕೋರ್ಟ್ ಇಲ್ಲಿ ನಡೆಯುತ್ತಿರುವ ಕಾರಣ, ಇತ್ಯರ್ಥವಾಗುವವರೆಗೆ ಯಾವುದೇ ಕಾನೂನು ಕ್ರಮ ಜರುಗಿಸಬಾರದಾಗಿ ಕೋರಿರುತ್ತಾರೆ.

ಕ್ಷೇತ್ರ ಶಿಕ್ಷಣಾಧಿಕಾರಿ, ತೀರ್ಥಹಳ್ಳಿ ಇವರು ಸಲ್ಲಿಸಿರುವ ವರದಿ ಆಧರಿಸಿ ಸದರಿ ಶಿಕ್ಷಕರಿಗೆ ಉಲ್ಲೇಖ 10ರ ಪತ್ರದಲ್ಲಿ ಕಾರಣ ಕೇಳುವ ನೋಟೀಸನ್ನು ಹಾಗೂ ಶಿಕ್ಷಕರ ಮೇಲಿನ ಆರೋಪಗಳ ಬಗ್ಗೆ 1 ರಿಂದ 4ರವರೆಗಿನ ಅನುಬಂಧದಲ್ಲಿ ಆರೋಪ ಪಟ್ಟಿಯನ್ನು ಉಲ್ಲೇಖ 11ರ ತಿಳುವಳಿಕೆ ಪತ್ರದಲ್ಲಿ ಸದರಿ ಶಿಕ್ಷಕರಿಗೆ ಜಾರಿಗೊಳಿಸಿ ಪ್ರತಿ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿರುತ್ತದೆ.

ಆರೋಪ ಪಟ್ಟಿಗೆ ಉತ್ತರಿಸಲು ಸಮಯಾವಕಾಶದ ಅಗತ್ಯ ಇರುವುದಾಗಿ ಉಲ್ಲೇಖ 12ರ ಪತ್ರದಲ್ಲಿ ತಿಳಿಸಿ ಕಾಲಾವಕಾಶ ನೀಡುವಂತೆ ಕೋರಿದ್ದು, ನಂತರ ಉಲ್ಲೇಖ 13ರ ಪತ್ರದಲ್ಲಿ ಆರೋಪಗಳಿಗೆ ಉತ್ತರಿಸಿ ಎಲ್ಲಾ ಆರೋಪಗಳನ್ನು ಅಲ್ಲಗಳೆದಿರುತ್ತಾರೆ.

ಪ್ರಕರಣದ ಸತ್ಯಾಸತ್ಯತೆ ತಿಳಿಯುವ ಸಲುವಾಗಿ ಉಲ್ಲೇಖ 13ರ ಈ ಕಛೇರಿಯ ಪತ್ರದಲ್ಲಿ ಕೆಸಿಎಸ್ 1957ರ ನಿಯಮ 11 ರಂತೆ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಕ ಮಾಡಿ ಪ್ರಕರಣದ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸುವಂತೆ ಆದೇಶಿಸಲಾಗಿರುತ್ತದೆ.

ಅದರಂತೆ ವಿಚಾರಣಾಧಿಕಾರಿಗಳು ಉಲ್ಲೇಖ 14ರ ಪತ್ರದಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನ್ನು ಸುದೀರ್ಘವಾಗಿ ಪರಿಶೀಲಿಸಿದೆ. ವಿಚಾರಣಾ ವರದಿಯನುಸಾರ ಸದರಿ ಶಿಕ್ಷಕರು ದಿನಾಂಕ:20.10.2004 ರಿಂದ ದಿನಾಂಕ:27.09.2005 ರವರೆಗೆ ಶಾಲಾ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗುವುದಕ್ಕೆ ಬೆಂಗಳೂರಿನ ಕಾರಾಗೃಹದಲ್ಲಿ ಖೈದಿಯಾಗಿದ್ದದ್ದೇ ಮುಖ್ಯ ಕಾರಣ ಎಂಬುದು ದೃಢಪಟ್ಟಿರುತ್ತದೆ. ವಿಚಾರಣಾ ವರದಿಯಲ್ಲಿನ ಅಭಿಪ್ರಾಯದಂತೆ ಸದರಿ ಶಿಕ್ಷಕರು ಅವರ ವ್ಯಾಜ್ಯ ನಂತರದ ಮೇಲ್ಮನವಿ ಸಂಬಂಧ ಅವರ ವಕೀಲರೊಂದಿಗೆ ಸತತ ಸಂಪರ್ಕ ಹೊಂದಿದ್ದು ಅವರಿಗೆ ಅಗತ್ಯ ಮಾಹಿತಿಯನ್ನು ನೀಡುತ್ತಿದ್ದು, ಆದರೆ ಗೈರು ಹಾಜರಾಗಿರುವ ಹಾಗೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಶಿಕ್ಷೆಗೊಳಗಾಗಿ ಕಾರಾಗೃಹದಲ್ಲಿ ಖೈದಿಯಾಗಿರುವ ವಿಷಯವನ್ನು ಇಲಾಖೆಗೆ ತಿಳಿಸುವಲ್ಲಿ ಮಾನಸಿಕ ಆಘಾತಕ್ಕೆ ಒಳಗಾಗಿದ್ದೆ ಎಂಬುದಾಗಿ ಆರೋಪಿ ತಿಳಿಸಿರುವ ಹೇಳಿಕೆಯನ್ನು ಒಪ್ಪಲು ಸಾಧ್ಯವಾಗುವುದಿಲ್ಲ. ಆರೋಪಿಯು ನೇಮಕಾತಿ ಹೊಂದುವ ಪೂರ್ವದಲ್ಲಿ ಈ ವ್ಯಾಜ್ಯವು ಪ್ರಾರಂಭಗೊಂಡಿದ್ದು ನೇಮಕಾತಿ ಹೊಂದಿ ಕರ್ತವ್ಯಕ್ಕೆ ಸೇರುವ ಸಂದರ್ಭದಲ್ಲಿ ತನ್ನ ಮೇಲೆ ಕ್ರಿಮಿನಲ್ ಪ್ರಕರಣ ದಾಖಲಾಗಿದೆ ಎಂಬ ಅಂಶವನ್ನು ಪ್ರಾಧಿಕಾರದ ಮುಂದೆ ಹೇಳದೆ ಸತ್ಯ ಸಂಗತಿಯನ್ನು ಮರೆಮಾಚಿರುವುದು ದೃಢಪಟ್ಟಿರುತ್ತದೆ. ಆರೋಪಿಯು ಪೊಲೀಸ್ ಠಾಣೆಯಲ್ಲಿ ಬಂಧಿಯಾದ ಸಂದರ್ಭದಲ್ಲಾಗಲೀ ವಿಚಾರಣಾಧಿನ ಖೈದಿಯಾದ ಸಂದರ್ಭದಲ್ಲಾಗಲೀ ನಂತರ ರಾಜ್ಯ ಉಚ್ಛ ನ್ಯಾಯಾಲಯದ ತೀರ್ಪಿನ ಅನುಸಾರ ಶಿಕ್ಷೆ ಅನುಭವಿಸುವ ಸಂದರ್ಭದಲ್ಲಿಯಾಗಲೀ ತಾನೊಬ್ಬ ಸರ್ಕಾರಿ ನೌಕರನೆಂಬ ಮಾಹಿತಿಯನ್ನು ಸಂಬಂಧಿಸಿದ ಪೊಲೀಸ್ ಇಲಾಖೆಗೆ, ಮಾನ್ಯ ನ್ಯಾಯಾಲಯಕ್ಕೆ ಅಥವಾ ಬಂಧಿಖಾನೆಯ ಮುಖ್ಯಸ್ಥರಿಗೆ ನೇಮಕಾತಿ ಮಾಡಿದ ಪ್ರಾಧಿಕಾರಕ್ಕೆ ಹಾಗೂ ನಿಯಂತ್ರಣಾಧಿಕಾರಿಗಳಿಗೆ ಹಾಗೂ ಶಾಲಾ ಮುಖ್ಯಸ್ಥರಿಗೆ ಮಾಹಿತಿಯನ್ನು ಉದ್ದೇಶಪೂರ್ವಕವಾಗಿ ನೀಡದೇ ಸತ್ಯ ಸಂಗತಿಯನ್ನು ಮರೆಮಾಚಿರುವ ಅಂಶ ಸ್ಪಷ್ಟವಾಗಿರುತ್ತದೆ. ಶಿಸ್ತು ಪ್ರಾಧಿಕಾರಿಯು ತನ್ನ ಮೇಲೆ ಕೈಗೊಳ್ಳುವ ಶಿಸ್ತು ಕ್ರಮವನ್ನು ತಪ್ಪಿಸಿಕೊಳ್ಳುವ ದುರದ್ದೇಶದಿಂದಲೇ ಬಂಧನ ಹಾಗೂ ಜೈಲು ವಾಸದ ವಿಚಾರವನ್ನು ದುರುದ್ದೇಶದಿಂದಲೇ ತಿಳಿಸದೇ ಇರುವುದು ಸ್ಪಷ್ಟವಾಗಿ ಹಾಗೂ ನಿಸ್ಸಂಶಯವಾಗಿ ಸಾಭೀತಾಗಿರುತ್ತದೆ. ಸದರಿ ಆರೋಪಿತ ಶಿಕ್ಷಕರು ದಿನಾಂಕ:20.10.2004 ರಿಂದ ದಿನಾಂಕ:27.09.2005 ರವರೆಗೆ ಶಾಲೆಗೆ ಅನಧಿಕೃತ ಗೈರು ಹಾಜರಾಗಿರುವುದು ಹಾಗೂ ನೇಮಕಾತಿ ಪ್ರಾಧಿಕಾರಿಗಳ ಹಾಗೂ ನಿಯಂತ್ರಣಾಧಿಕಾರಿಗಳ ನೋಟೀಸ್‌ಗಳನ್ನು ಸ್ವೀಕರಿಸದೇ ಇರುವ ಆರೋಪವು ಸಾಭೀತಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸದರಿ ಶಿಕ್ಷಕರನ್ನು ಕೆ.ಸಿ.ಎಸ್.ಆರ್. ನಿಯಮ 108 ರಂತೆ ಸೇವೆಯಿಂದ ವಜಾಗೊಳಿಸುವುದು ಸೂಕ್ತ ಎಂಬುದಾಗಿ ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಎಸ್.ಎಲ್. ಚವ್ಹಾಣ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ ಶ್ರೀ ತಿಮ್ಮಪ್ಪಗೌಡ ಕೆ.ಪಿ. ಸಹ ಶಿಕ್ಷಕ, ಸರ್ಕಾರಿ ಹಿ ಪ್ರಾಶಾಲೆ, ಮಲ್ಲೇಸರ, ತೀರ್ಥಹಳ್ಳಿ ತಾ ಇವರು ಎಸ್.ಆರ್. ನಿಯಮ 108ನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವುದು ದೃಢಪಟ್ಟಿರುವುದರಿಂದ ಸದರಿ ಶಿಕ್ಷಕರನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿರುತ್ತೇನೆ.

**ಎಸ್.ಎಲ್. ಚವ್ಹಾಣ್**

ಪಿ.ಆರ್.1179

ಉಪನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿ,
ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

**ನಂ. ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್-33:08-09, ದಿನಾಂಕ:30ನೇ ಸೆಪ್ಟೆಂಬರ್, 2008**

**ವಿಷಯ:** ಸಮಾಪನೆಗೊಂಡಿರುವ ಸರ್ಕಾರಿ ವಿಜ್ಞಾನ ಕಾಲೇಜು ನೌಕರರ ಸಹಕಾರ ಸಂಘ ನಿ., ಚಿತ್ರದುರ್ಗ ಇದರ ನೊಂದಣಿ ರದ್ದತಿಯ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನೆ ಸಿಆರ್:26:2005 ದಿನಾಂಕ;16.11.2005.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಪತ್ರ ಸಂ.ಸನಿ:30:ಸಮಾಪನೆ: ಸಿಆರ್:52:2008-09, ದಿನಾಂಕ:30.09.2008.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ ಈ ಮೇಲ್ಕಂಡ ಸಹಕಾರ ಸಂಘವು ಕ್ರಮಸಂಖ್ಯೆ: ಎಆರ್‌ಸಿ:813:84–85 ದಿನಾಂಕ:24.10.1984ರಲ್ಲಿ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು, ಚಿತ್ರದುರ್ಗ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಶೂನ್ಯಗೊಳಿಸಿ, ಸಂಘದ ನೊಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರು ಸಹ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎ: 2001, ದಿನಾಂಕ:21.11.2002 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸಹಕಾರ ಸಂಘಗಳ ಉಪನಿಬಂಧಕರು, ಶ್ರೀ ಆರ್.ಶಿವಪ್ರಕಾಶ್, ಆದ ನಾನು ಸಮಾಪನೆಗೊಂಡ ಸರ್ಕಾರಿ ವಿಜ್ಞಾನ ಕಾಲೇಜು ನೌಕರರ ಸಹಕಾರ ಸಂಘ ನಿ., ಚಿತ್ರದುರ್ಗ ಈ ಸಂಘದ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 33 (ಎಸ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ:30.09.2008ರಂದು ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.1174

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ.ಎಸ್‌ಡಿಕೆ/182/ ಡಿಟಿಸಿಆರ್/2006–07, ದಿನಾಂಕ:18ನೇ ಅಕ್ಟೋಬರ್, 2008**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿಗಳು** |
|---|---|
| ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪವಿಭಾಗ, ಬಂಟ್ವಾಳ | ಮಹಮ್ಮದ್ ಹನೀಫ್ (32ವ) ಬಿನ್ ಬಡುವನ್ ಕುಂಞ್ಞಿ, ಸಂತಡ್ಕ ಮನೆ, ಮಿಂಚಾ ಗ್ರಾಮ, ಮಂಜೇಶ್ವರ, ಕೇರಳ ರಾಜ್ಯ. |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರು ತಮ್ಮ ಸಿಬ್ಬಂದಿಯವರೊಂದಿಗೆ ದಿನಾಂಕ:13.12.2006 ರಂದು ರಾತ್ರಿ 11.30 ಗಂಟೆ ಸಮಯದಲ್ಲಿ ಬಂಟ್ವಾಳ ತಾಲ್ಲೂಕು ಮಾಣಿ ಬಳಿ ರಸ್ತೆ ಗಾವಲು ನಡೆಸುತ್ತಿರುವಾಗ ಪುತ್ತೂರು ಕಡೆಯಿಂದ ವೇಗವಾಗಿ ಮಾರುತಿ 800 ಕಾರು ಬರುತ್ತಿರುವುದನ್ನು ಕಂಡು ನಿಲ್ಲಿಸಿದಾಗ ಕಾರಿನಲ್ಲಿದ್ದ ಚಾಲಕನು ಓಡಿಹೋಗಲು ಪ್ರಯತ್ನಿಸಿ ನಂತರ ಸಿಬ್ಬಂದಿಯವರ ಸಹಾಯದಿಂದ ಹಿಡಿದು ವಿಚಾರಿಸಿದಾಗ ಆತನು ಗಾಬರಿಯಿಂದ ಸದ್ರಿ ಕಾರಿನಲ್ಲಿ ಸಾರಾಯಿ ಸ್ಯಾಚೇಟುಗಳು ಇರುವುದು ಇದನ್ನು ಸಾಗಿಸಲು ಪರವಾನಿಗೆ ಇಲ್ಲವೆಂದು ತಿಳಿಸಿದನು. ನಂತರ ಆತನ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಮಹಮ್ಮದ್ ಹನೀಫ್ ಬಿನ್: ಬಡುವನ್ ಕುಂಞ್ಞಿ ಸಂತಡ್ಕ ಮನೆ, ಮಿಂಚಾ ಗ್ರಾಮ, ಮಂಜೇಶ್ವರ ಕೇರಳ ರಾಜ್ಯ ಎಂದು ತಿಳಿಸಿರುತ್ತಾನೆ. ಸದ್ರಿ ಕಾರನ್ನು ಪರಿಶೀಲಿಸುವ ಸಲುವಾಗಿ ಹತ್ತಿರದಲ್ಲಿಯೇ ಪಂಚರನ್ನು ಹುಡುಕಲಾಗಿ ಯಾರೂ ಕಾಣಿಸದ ಕಾರಣ ಇಲಾಖಾ ಸಿಬ್ಬಂದಿಯವರನ್ನೇ ಪಂಚರನ್ನಾಗಿರಿಸಿಕೊಂಡು ಮಾನ್ಯ ಘನ ನ್ಯಾಯಾಲಯದಿಂದ ಸರ್ಚ್‌ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದ ಕಾರಣ ಕರ್ನಾಟಕ ಅಬಕಾರಿ ಕಾಯಿದೆ ಕಲಂ 54ರ ಶೋಧನಾ ಸಮುಚಿತ ಆಧಾರವನ್ನು ಸ್ಥಳದಲ್ಲಿಯೇ ತಯಾರಿಸಿ ಆರೋಪಿಯ ಜೊತೆ ಸದ್ರಿ ಕಾರಿನ ಒಳಗೆ ಶೋಧಿಸಿದಾಗ ಹಿಂದಿನ ಸೀಟಿನಲ್ಲಿ ಸೀಟು ಇಲ್ಲದೇ ಇದ್ದು, ಅಲ್ಲಿ ಮೂರು ಗೋಣಿಚೀಲದ ಕಟ್ಟುಗಳು ಕಾಣಿಸಿದ್ದು, ಅದರೊಳಗೆ ಸಾರಾಯಿ ಸ್ಯಾಚೇಟುಗಳು ಇರುವುದು ಕಂಡುಬಂದಿದೆ. ಪ್ರತಿಯೊಂದು ಗೋಣಿ ಚೀಲದಲ್ಲಿ ತಲಾ 100 ಎಂಎಲ್‌ನ 500 ಸಾರಾಯಿ

ಸ್ಯಾಚೇಟುಗಳಂತೆ ಒಟ್ಟು 1500 ಸಾರಾಯಿ ಸ್ಯಾಚೇಟುಗಳ ಸಾರಾಯಿ ಸಾಗಿಸಲಾಗುತ್ತಿರುವುದು ಪತ್ತೆ ಮಾಡಿರುತ್ತಾರೆ. ಸ್ಯಾಚೇಟುಗಳನ್ನು ಪರಿಶೀಲಿಸಿದಾಗ ಅವುಗಳಲ್ಲಿ ಸಾರಾಯಿ ಹೀರಾ ಶುಗರ್ ಡಿಸ್ಟಿಲರಿ, ಸಂಕೇಶ್ವರ-591314 ಜಿಲ್ಲಾ ಬೆಳಗಾವಿ ಲೈಸನ್ಸ್ ಸಂ.ಇಸಿಡಿ:7:ಡಿ ಮತ್ತು ಎ: 2004-05 ದಿನಾಂಕ:31.08.2004 ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಿದೆ ಎಂದು ಸಾರಾಯಿ ಸ್ಯಾಚೇಟು ಮೇಲೆ ಕೆಂಪು ಅಕ್ಷರಗಳಲ್ಲಿ ಬರೆದಿರುತ್ತದೆ. ಪ್ರತಿ ಗೋಣಿ ಚೀಲದಿಂದ 8 ಸಾರಾಯಿ ಸ್ಯಾಚೇಟುಗಳಂತೆ ಒಟ್ಟು 24 ಸಾರಾಯಿ ಸ್ಯಾಚೇಟುಗಳನ್ನು ಪ್ಯಾಕ್ ಮಾಡಿ ಇಲಾಖಾ ಸೀಲಿನಿಂದ ಸೀಲ್ ಮಾಡಿ ರಾಸಾಯನಿಕ ವಿಶ್ಲೇಷಣೆಗಾಗಿ ಮಾದರಿಗಳನ್ನು ತೆಗೆದಿರುತ್ತಾರೆ. ನಂತರ ಆರೋಪಿಯ ಸಹಿ ಇರುವ ಚೀಟಿಯನ್ನು ಅವುಗಳಿಗೆ ಅಂಟಿಸಲಾಯಿತು. ಸದ್ರಿ ಕಾರನ್ನು ಪರಿಶೀಲಿಸಿದಾಗ ಅದು ಮಾರುತಿ 800 ಕಾರು ಆಗಿದ್ದು ಇದರ ನೊಂದಣಿ ಸಂಖ್ಯೆ: ಕೆಎ-04-ಎಂ-1946 ಎಂದು ಬರೆದಿದ್ದು ಇಂಜಿನ್ ಸಂ:574104 ಮತ್ತು ಚಾಸೀಸ್ ಸಂ:407817 ಎಂದು ಬರೆದಿರುತ್ತದೆ. ಸ್ಥಳದಲ್ಲಿಯೇ ಮಾದರಿ ಮೊಹರು ಹಾಗೂ ಮಹಜರನ್ನು ತಯಾರಿಸಲಾಯಿತು. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 11, 14, 15 ಹಾಗೂ 32, 34 ಮತ್ತು 38ಎ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ ಸಾರಾಯಿ ಸ್ಯಾಚೇಟುಗಳನ್ನು ಹಾಗೂ ಅಕ್ರಮ ಸಾಗಾಣಿಕೆಗಾಗಿ ಬಳಸಿದ ಮಾರುತಿ 800 ಕಾರನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಆರೋಪಿಯನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಆರೋಪಿಯ ವಿರುದ್ಧ ತಕ್ಷೀರು ಸಂಖ್ಯೆ: 1/2006-07, ದಿನಾಂಕ:13.12.2006 ರಂತೆ ಪ್ರಕರಣವನ್ನು ನೋಂದಾಯಿಸಿ ಪ್ರಥಮ ಮಾಹಿತಿ ವರದಿ, ಮಹಜರು ಪ್ರತಿ ಹಾಗೂ ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಮುಂದಿನ ತನಿಖೆಯನ್ನು ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪವಿಭಾಗ, ಬಂಟ್ವಾಳ ಇವರು ಕೈಗೊಂಡಿರುತ್ತಾರೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪವಿಭಾಗ, ಬಂಟ್ವಾಳ ಇವರ ತನಿಖಾ ವರದಿ ಸಂ:1/2006-07 ದಿನಾಂಕ:24.09.2007 ರ ವರದಿಯಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೇಟುಗಳಿಂದ ಮಾದರಿಗಾಗಿ ತೆಗೆದ ಸ್ಯಾಂಪಲ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದ್ರಿ ಮಾದರಿಗಳನ್ನು ವಿಶ್ಲೇಷಿಸಿದ ಸಹಾಯಕ ರಾಸಾಯನಿಕ ತಜ್ಞರು, ಮಂಗಳೂರುರವರ ಪತ್ರ ಸಂ:ಇ-23-24 ದಿನಾಂಕ:07.02.2007ರ ವರದಿಯಲ್ಲಿ ಮದ್ಯಸಾರದ ಪ್ರಮಾಣ 27% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಹಾಗೂ ಸಾರಾಯಿಯು ಮಾನವ ಸೇವನೆಗೆ ಯೋಗ್ಯವಿಲ್ಲವೆಂದು ದೃಢೀಕರಿಸಿರುತ್ತಾರೆ. ಹಾಗೂ ವಾಹನದ ಬಗ್ಗೆ ಹಕ್ಕು ಚಲಾಯಿಸಲು ಇಲ್ಲಿಯವರೆಗೆ ಅಬಕಾರಿ ಉಪ ಅಧೀಕ್ಷಕರ ಕಛೇರಿ ಬಂಟ್ವಾಳ ಉಪವಿಭಾಗ, ಬಂಟ್ವಾಳ ರವರ ಕಛೇರಿಗೆ ಯಾರೂ ಸಂಪರ್ಕಿಸಿಲ್ಲವೆಂದು ತಿಳಿಸಿರುತ್ತಾರೆ.

ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ ದಕ್ಷಿಣ, ಕನ್ನಡ ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಇಐಬಿ: ಡಿಟಿಸಿಆರ್: 182:2006-07 ದಿನಾಂಕ:05.10.2007ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿಯನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅದೇ ಕಲಂ 43ಎ (3) ರ ಪ್ರಕಾರ ಮುಟ್ಟುಗೋಲು ಹಾಕಿಕೊಂಡ ಸಾರಾಯಿಯನ್ನು ನಿಯಮಾನುಸಾರ ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪವಿಭಾಗ ಇವರ ಸಮಕ್ಷಮ ನಾಶಪಡಿಸಿರುತ್ತಾರೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಕೆಎ-04-ಎಂ-1946ರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಲ್ಲಿಸುವಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು (ನಾರ್ತ್) ಕಾರ್ಪೋರೇಶನ್ ಶಾಪಿಂಗ್ ಕಾಂಪ್ಲೆಕ್ಸ್, ಯಶವಂತಪುರ, ಬೆಂಗಳೂರು-22 ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:05.01.2007ರಂದು ಪತ್ರ ಬರೆಯಲಾಗಿದೆ. ಆದರೆ ಯಾವುದೇ ವರದಿ ಇದುವರೆಗೂ ಬಂದಿರುವುದಿಲ್ಲ. ಹಾಗೂ ವಾಹನದ ಬಿಡುಗಡೆಗಾಗಿ ವಾಹನ ಮಾಲೀಕರು ಅಥವಾ ಆರೋಪಿಗಳು ಇದುವರೆಗೂ ಈ ಪ್ರಾಧಿಕಾರದ ಮುಂದೆ ಸೂಕ್ತ ದಾಖಲಾತಿಗಳೊಂದಿಗೆ ಹಾಜರಾಗಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಾಧಾರಗಳೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:13.12.2006ರಂದು ಮಾರುತಿ 800 ಕಾರು ಸಂಖ್ಯೆ: ಕೆಎ-04-ಎಂ-1946 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಆರೋಪಿಗಳು 100 ಎಂಎಲ್‌ನ 1500 ಸಾರಾಯಿ ಸ್ಯಾಚೇಟುಗಳನ್ನು ಹೊಂದಿ ಸಾಗಾಟ ಮಾಡುತ್ತಿದ್ದುದನ್ನು ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪವಿಭಾಗ, ಬಂಟ್ವಾಳರವರು ಪತ್ತೆಹಚ್ಚಿ ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಸಾರಾಯಿಯಾಗಿದ್ದು, ಸದ್ರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಭೀತಾಗಿರುವುದಾಗಿ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪವಿಭಾಗ, ಬಂಟ್ವಾಳ ಇವರು ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಕೆಎ–04–ಎಂ–1946ನ್ನು ವಶಪಡಿಸಿಕೊಂಡು ಸುಮಾರು 1 ವರ್ಷ 11 ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಆರೋಪಿ ಹಾಗೂ ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ವಾಹನ ಬಿಡುಗಡೆಗಾಗಿ ಮತ್ತು ವಾಹನವು ಅಕ್ರಮ ಸಾರಾಯಿ ಸಾಗಾಟದಲ್ಲಿ ತೊಡಗಿಲ್ಲವೆಂದು ಸಾಬೀತುಪಡಿಸಲು ಯಾವುದೇ ಸಮಂಜಸವಾದ ಉತ್ತರ ಈ ಪ್ರಾಧಿಕಾರದ ಮುಂದೆ ಒಪ್ಪಿಸದಿರುವುದರಿಂದ ಮತ್ತು ವಾಹನ ಮಾಲೀಕರು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಈ ಕಾರಣದಿಂದ ಆರೋಪಿಗಳು ಸಾರಾಯಿ ಮಾರಾಟ ಮಾಡಲೆಂಬ ಉದ್ದೇಶದಿಂದ ಕೇರಳಾ ರಾಜ್ಯಕ್ಕೆ ಸಾಗಾಟ ಮಾಡಿರುವುದು ಸ್ಪಷ್ಟವಾಗಿ ಕಾಣಬರುತ್ತದೆ. ಹಾಗೂ ಆರೋಪಿಗಳನ್ನು ಪತ್ತೆಹಚ್ಚಲು ಕಷ್ಟಸಾಧ್ಯವಾಗಿರುವುದರಿಂದ ಹಾಗೂ ವಶಪಡಿಸಿಕೊಂಡ ಮಾರುತಿ 800 ಕಾರನ್ನು 1 ವರ್ಷ 11 ತಿಂಗಳು ಕಳೆದಿದ್ದರೂ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರಕ್ಕೆ ಯಾರೂ ಅರ್ಜಿಯನ್ನು ಸಲ್ಲಿಸದೇ ಇರುವ ಕಾರಣ, ಅಕ್ರಮವಾಗಿ ಸಾರಾಯಿ ಸಾಗಾಣಿಕೆಗೆ ಬಳಸಿದ ಮಾರುತಿ 800 ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂಬ ಹಿನ್ನಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪವಿಭಾಗ, ಬಂಟ್ವಾಳ ಇವರ ತಕ್ಷೀರು ನಂಬರ್ 1/2006–07, ದಿನಾಂಕ:13.12.2006ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14 ರಂತೆ ಅಪರಾಧ ಗುರುತಿಸಿದ ಕಲಂ 32, 34, 38ಎ, 43 ರೀತ್ಯಾ ಶಿಕ್ಷಾರ್ಹ ಅಪರಾಧ ಸಂಬಂಧ ಜಪ್ತುಪಡಿಸಿರುವ ಮಾರುತಿ 800 ಕಾರು ಸಂ.ಕೆಎ–04–ಎಂ–1946 (ಇಂಜಿನ್ ಸಂ:574104 ಮತ್ತು ಚಾಸೀಸ್ ಸಂ:407817) ನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:18.10.2008 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.1272

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆರವರ ಕಛೇರಿ, ನಂ.146, 8ನೇ ಅಡ್ಡರಸ್ತೆ, 3ನೇ ಮುಖ್ಯರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–3**

**ಕ್ರಮಾಂಕ:ಡಿಆರ್‌ಬಿ–1:ನೋಂ.ರ:09:2008–09, ದಿನಾಂಕ:30ನೇ ಆಗಸ್ಟ್, 2008**

**ವಿಷಯ:** ಸಮಾಪನೆಯಲ್ಲಿರುವ ಸಹಕಾರ ಸಂಘಗಳ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ನಿರೀಕ್ಷಕರು (ದಕ್ಷಿಣ–1), ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಒಂದನೇ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಸನಿ–44/ನಿದ–2/15/2008–09/25.

2) ಸಹಕಾರ ಸಂಘಗಳ ನಿರೀಕ್ಷಕರು (ದಕ್ಷಿಣ–2) ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಒಂದನೇ ವಲಯ, ಬೆಂಗಳೂರುರವರ ಪತ್ರ ಸಂಖ್ಯೆ: ಸ.ಸಂ.ನಿ/ರದ್ಧತಿ/ 37 ಮತ್ತು 40/ 2008–09, ದಿನಾಂಕ:27.08.2008.

**ಪ್ರಸ್ತಾವನೆ:**

ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–1 ಮತ್ತು 2 ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಒಂದನೇ ವಲಯ, ಬೆಂಗಳೂರು ಇವರು ಉಲ್ಲೇಖಿತ ಪತ್ರಗಳಲ್ಲಿ ಅನುಬಂಧ–1 ರಲ್ಲಿನ ಸಮಾಪನೆಗೊಂಡ ಸಹಕಾರ ಸಂಘಗಳ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸಮಾಪನೆಗೊಂಡಿರುವ ಸಹಕಾರ ಸಂಘಗಳಲ್ಲಿ ಆಸ್ತಿ–ಜವಾಬ್ದಾರಿ ವಿಲೇವಾರಿಗೆ ಯಾವುದೇ ರಹ ಹಾಗೂ ದಾರಿಯಿರುವುದಿಲ್ಲವೆಂದು ಸಹ ತಿಳಿಸಿರುತ್ತಾರೆ. ಈ ಸಹಕಾರ ಸಂಘಗಳನ್ನು ಸಮಾಪನೆಯಲ್ಲಿ ಮುಂದುವರೆಸುವುದರಿಂದ ಯಾರಿಗೂ ಪ್ರಯೋಜನವಾಗುತ್ತಿರಲಿಲ್ಲವೆಂದು ತಿಳಿಸಿ, ಈ ಸಹಕಾರ ಸಂಘಗಳ ನೋಂದಣಿಯ ರದ್ಧತಿಗೆ ಶಿಫಾರಸ್ಸು ಮಾಡಿರುತ್ತಾರೆ.

ಸಮಾಪಕರು ಸಹ ಸಂಘದ ಪ್ರಭಾರ ವಹಿಸಿಕೊಳ್ಳಲು ಎಷ್ಟೇ ಪ್ರಯತ್ನಪಟ್ಟರೂ ನೋಂದಾಯಿತ ವಿಳಾಸದಲ್ಲಿ ಸಂಘವು ಇಲ್ಲದಿರುವುದನ್ನು ಮನಗಂಡು ಸಂಘದ ಪ್ರಭಾರವನ್ನು ಸ್ವಯಂ ಪ್ರಭಾರ ವಹಿಸಿಕೊಂಡಿರುತ್ತಾರೆ. ಹಾಗೂ ಈ ರೀತಿಯ ಸಹಕಾರ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ತಿಳಿಸಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸಮಾಪನೆಯಲ್ಲಿರುವ ಸಹಕಾರ ಸಂಘಗಳ ಕಾರ್ಯವೈಖರಿಯನ್ನು ಪರಿಶೀಲಿಸಿದಾಗ ಕೆಳಕಂಡ ಅಂಶಗಳು ವ್ಯಕ್ತವಾಗುತ್ತವೆ.

1) ಸಂಘದ ವಿಳಾಸ ಬದಲಾವಣೆ ಆಗಿದ್ದಲ್ಲಿ ಆ ಬಗ್ಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರಿಗಾಗಲೀ ಅಥವಾ ಈ ಕಛೇರಿಗಾಗಲೀ ಯಾವುದೇ ಮಾಹಿತಿ ಸಲ್ಲಿಸಿರುವುದಿಲ್ಲ.

2) ಸಹಕಾರ ಸಂಘಗಳ ಕಾಯ್ದೆ ಕಲಂ 28ಎ ಮತ್ತು ನಿಯಮ 14ರನ್ವಯ ಆಡಳಿತ ಮಂಡಳಿಗೆ ಚುನಾವಣೆ ಮಾಡಿರುವ ಬಗ್ಗೆಯಾಗಲೀ ಸಹಕಾರ ಸಂಘಗಳ ಕಾಯ್ದೆ ಕಲಂ 29ಎ(5) ಅಥವಾ 29(ಎಫ್) (7)ರ ಪ್ರಕಾರ ಚುನಾವಣೆಯಾದ ತರುವಾಯ ಪದಾಧಿಕಾರಿಗಳು ಆಯ್ಕೆಗೊಂಡ ಬಗ್ಗೆಯಾಗಲೀ ಯಾವುದೇ ಮಾಹಿತಿ ಸಲ್ಲಿಸಿರುವುದಿಲ್ಲ.

3) ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 29ಬಿ(6) ರನ್ವಯ ಸಂಘದ ಕಾರ್ಯದರ್ಶಿ ಪ್ರತಿ ಮಾಹೆ ಮುಗಿದ 15 ದಿನಗಳೊಳಗಾಗಿ ನಗದು ಪುಸ್ತಕದ ಉದ್ಧೃತ ಭಾಗದ ದೃಢೀಕೃತ ಪ್ರತಿಯನ್ನು ಹಾಗೂ ಆಡಳಿತ ಮಂಡಳಿ ಸಭೆ/ ವಾರ್ಷಿಕ ಮಹಾಸಭೆಯ ದೃಢೀಕೃತ ನಡವಳಿಕೆಯ ಪ್ರತಿಯನ್ನು ಸಭೆ ನಡೆದ 15 ದಿವಸದೊಳಗಾಗಿ ಸಂಬಂಧಪಟ್ಟ ನಿಬಂಧಕರಿಗೆ ಸಲ್ಲಿಸಬೇಕಾಗಿದ್ದು ಸಲ್ಲಿಸಿರುವುದಿಲ್ಲ.

4) ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 63(4) ರನ್ವಯ ಸಹಕಾರಿ ವರ್ಷ ಅಂತ್ಯಗೊಳ್ಳುವ 2 ತಿಂಗಳು ಮುಂಚಿತವಾಗಿ ಸಂಘದ ಲೆಕ್ಕ ಪತ್ರಗಳ ಆರ್ಥಿಕ ತಃಖ್ತೆಗಳನ್ನು ನಿಬಂಧಕರಿಗೆ ಕಳುಹಿಸಬೇಕಾಗಿದ್ದು, ಇದುವರೆಗೂ ಕಳುಹಿಸಿರುವುದಿಲ್ಲ.

5) ಪ್ರತಿ ವರ್ಷವೂ ಇಲಾಖೆಗೆ ವಾರ್ಷಿಕ ಅಂಕಿ-ಅಂಶ ತಃಖ್ತೆಗಳನ್ನು ಸಲ್ಲಿಸಬೇಕಾಗಿದ್ದು, ಹಲವಾರು ವರ್ಷಗಳಿಂದ ಸಲ್ಲಿಸಿರುವುದಿಲ್ಲ.

6) ಸಂಘವು ಸದಸ್ಯರುಗಳ ಏಳಿಗೆಗಾಗಿ ಕಾರ್ಯನಿರ್ವಹಿಸುತ್ತಿದೆ ಎಂಬುದರ ಬಗ್ಗೆ ಯಾವುದೇ ಸಂದರ್ಭದಲ್ಲಿ ಮಾಹಿತಿಯನ್ನು ಈ ಕಛೇರಿಗೆ ಸಲ್ಲಿಸಿರುವುದಿಲ್ಲ.

ಮೇಲೆ ವಿವರಿಸಿರುವ ಅಂಶಗಳನ್ನು ಅವಲೋಕಿಸಿದಾಗ ಅನುಬಂಧ-1 ರಲ್ಲಿ ನಮೂದಿಸಿರುವ ಸಹಕಾರ ಸಂಘಗಳು ಹಲವಾರು ವರ್ಷಗಳಿಂದ ನಿಷ್ಕ್ರಿಯಗೊಂಡಿದ್ದು, ಸದರಿ ಸಂಘಗಳು ಅಸ್ತಿತ್ವದಲ್ಲಿದೆ ಎಂಬ ಬಗ್ಗೆ ಮತ್ತು ಇದರ ಲೆಕ್ಕಪತ್ರಗಳು ಯಾರ ಬಳಿ ಇವೆ ಎಂಬುದರ ಬಗ್ಗೆ ಯಾವುದೆ ರೀತಿಯ ಮಾಹಿತಿ ಇಲ್ಲದಿರುವುದಕ್ಕೆ ಪರಿಣಾಮವಾಗಿ ಸಮಾಪಕರು ಸಹಕಾರ ಕಾಯ್ದೆ ಕಲಂ 73 ಮತ್ತು 74 ಹಾಗೂ ಸಹಕಾರ ಸಂಘಗಳ ನಿಯಮಾವಳಿಗಳ ನಿಯಮ 24 ಮತ್ತು 33ರಲ್ಲಿ ವಿಧಿಸಿರುವಂತೆ ಸಮಾಪನಾ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ಸಾಧ್ಯತೆ ಇಲ್ಲದಿರುವುದನ್ನು ಮನಗಾಣಲಾಗಿದೆ. ಸದರಿ ಸಂಘಗಳನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ರೀತಿಯ ಉಪಯೋಗ ಇಲ್ಲದಿರುವುದನ್ನು ಗಮನಿಸಲಾಗಿದೆ. ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-1 ಮತ್ತು ದಕ್ಷಿಣ-2 ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ 1ನೇ ವಲಯ, ಬೆಂಗಳೂರು ಇವರು ಅನುಬಂಧ-1ರಲ್ಲಿ ನಮೂದಿಸಿರುವ ಸಹಕಾರ ಸಂಘಗಳ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುವುದರಿಂದ ಹಾಗೂ ತತ್ಸಂಬಂಧವಾದ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಹಕಾರ ಸಂಘಗಳಲ ಕಾಯ್ದೆ 1959 ಕಲಂ 75ರನ್ವಯ ಸದರಿ ಸಂಘಗಳ ನೋಂದಣಿಯನ್ನು ರದ್ದುಪಡಿಸಬಹುದೆಂಬ ಅಭಿಪ್ರಾಯಕ್ಕೆ ಬಂದು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ನಮೂದಿಸಿರುವ ಅಂಶಗಳನ್ನು ಪರಿಗಣಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಎಂ.ವೆಂಕಟಸ್ವಾಮಿ, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಅನುಬಂಧ-1ರಲ್ಲಿ ತಿಳಿಸಿದ ಸಹಕಾರ ಸಂಘಗಳ ನೋಂದಣಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲು ಆದೇಶಿಸಿದ್ದೇನೆ. ಈ ದಿನದಿಂದ ಸಂಘಗಳು ಕಾರ್ಪೋರೇಟ್ ಬಾಡಿಯಾಗಿರುವ ಅಸ್ತಿತ್ವವನ್ನು ಕಳೆದುಕೊಂಡಿದೆ.

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ:30.08.2008ರಂದು ನೀಡಲಾಗಿದೆ.

**ಎಂ. ವೆಂಕಟಸ್ವಾಮಿ**
ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

**ಈ ಕಛೇರಿಯ ಆದೇಶ ಕ್ರಮಸಂಖ್ಯೆ: ಡಿಆರ್‌ಬಿ-1/ನೋಂದಣಿ ರದ್ಧತಿ/09/2008-09 ಆದೇಶ ದಿನಾಂಕ:30.08.2008ಕ್ಕೆ**

**ಅನುಬಂಧ-1**

| ಕ್ರ. ಸಂ. | ಸಂಘದ ಹೆಸರು | ನೋಂದಣಿ ಸಂಖ್ಯೆ | ಸಮಾಪನೆ ಆದೇಶ | ಸಮಾಪನಾಧಿಕಾರಿಯ ಹೆಸರು ಮತ್ತು ಪದನಾಮ |
|---|---|---|---|---|
| 1. | ಕಾಮಾಕ್ಷಿಪಾಳ್ಯ ಸಿಲ್ಕ್ ಹ್ಯಾಂಡ್‌ಲೂಮ್ ಸಹಕಾರ ಸಂಘ ನಿ., ಬೆಂಗಳೂರು. | ಎಆರ್‌ಬಿ-2/ಆರ್‌ಇಜಿಎನ್/9650/82-83 ದಿನಾಂಕ:29.09.1982 | ಡಿಆರ್‌ಬಿ-1/ಎಲ್‌ಕ್ಯೂಡಿ/10/1999-2000 ದಿ:30.11.99 | ಶ್ರೀ ಎಸ್. ರಮಾನಂದ, ಸ.ಸಂ.ನಿರೀಕ್ಷಕರು, ದಕ್ಷಿಣ-2 |
| 2. | ಸ್ಟರ್ಲಿಂಗ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು | -"- | ಡಿಆರ್‌ಬಿ-/ಎಲ್‌ಕ್ಯೂಡಿ/46/1996-97 ದಿ:17.02.96 | ಶ್ರೀ ಟಿ. ಜಯಶೇಖರ್ ಸ.ಸಂ.ನಿರೀಕ್ಷಕರು, ದಕ್ಷಿಣ-1 |
| 3. | ಚೈತನ್ಯ ಎಸ್‌ಸಿ ಎಸ್‌ಟಿ ಸೈಟ್ ಓನರ್ಸ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು | ಎಆರ್‌ಬಿ-1/ಬಿ/ಆರ್‌ಇಜಿಎನ್/5222/81-82 ದಿನಾಂಕ:12.08.1982 | ಡಿಆರ್‌ಬಿ-1/ಎಲ್‌ಕ್ಯೂಡಿ/64/1998-99 ದಿ:30.03.99 | ಶ್ರೀ ಟಿ. ಜಯಶೇಖರ್ ಸ.ಸಂ.ನಿರೀಕ್ಷಕರು, ದಕ್ಷಿಣ-1 |

**ಎಂ. ವೆಂಕಟಸ್ವಾಮಿ**
ಪಿ.ಆರ್.1142 ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

## ತಹಶೀಲ್ದಾರರು, ಸಾಗರ ತಾಲ್ಲೂಕು, ಸಾಗರ, ಶಿವಮೊಗ್ಗ ಜಿಲ್ಲೆ

### ಅಧಿಸೂಚನೆ

**ಸಂ: ಸಿಬ್ಬಂದಿ (1) ವಿವ 39:2008–09, ದಿನಾಂಕ: 25ನೇ ಜುಲೈ 2008**

**ವಿಷಯ:** ಭಾರತ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ ಪ್ರಕರಣ ಕಲಂ 4(1)(ಬಿ) ಅನುಸಾರ ಕಂದಾಯ ಇಲಾಖೆಗೆ ಸಂಬಂಧಿಸಿದಂತೆ ಕಛೇರಿಯ ಮಾಹಿತಿಯನ್ನು ಪ್ರಕಟಿಸುವ ಬಗ್ಗೆ.

ಭಾರತ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ (ಸೆಂಟ್ರಲ್ ಆ್ಯಕ್ಟ್ 22 ಆಫ್ 2005) ಸೆಕ್ಷನ್ 5(1) 5(2) ಮತ್ತು 19(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಂದಾಯ ಇಲಾಖೆಗೆ ಸೇರಿದ ತಹಶೀಲ್ದಾರರ ಕಛೇರಿ ವ್ಯಾಪ್ತಿಯ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಅಂತಹ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು ಮಾಹಿತಿ ಕೋರಿರುವ ಅರ್ಜಿಗಳು ಅಥವಾ ಮೇಲ್ಮನವಿಗಳನ್ನು ಸ್ವೀಕರಿಸಲು ಅನುಕ್ರಮವಾಗಿ "ಸಾರ್ವಜನಿಕ ಅಧಿಕಾರಿ" ಮತ್ತು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ಈ ಕೆಳಕಂಡಂತೆ ಸರ್ಕಾರದಿಂದ ನೇಮಿಸಲಾಗಿದೆ. (ಸರಕಾರದ ಅಧಿಸೂಚನೆ ನಂ.ಕಂ.ಇ 37:ವಿಮಕ:2005 ದಿ:8.2.2006)

**1.4ಬಿ (1) ಅ : ಇಲಾಖೆಯ ವಿವರಗಳು ರಚನಾ ಸೂಚಿ ಕಾರ್ಯಗಳು ಹಾಗೂ ಕರ್ತವ್ಯಗಳು**

| ಕ್ರ. ಸಂ. | ಕಛೇರಿಯ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005 ಕಲಂ 5(1)ರ ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005 ಕಲಂ 5(2)ರ ಪ್ರಕಾರ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005 ಕಲಂ 19(1) ರ ಪ್ರಕಾರ ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 1. | ತಾಲ್ಲೂಕು ಕಛೇರಿ, ಸಾಗರ | ತಹಶೀಲ್ದಾರ್, ಸಾಗರ | ತಾಲ್ಲೂಕು ಕಛೇರಿ ಸಂಬಂಧಪಟ್ಟ ಶಿರಸ್ತೇದಾರರು (ವಿಷಯವಾರು) | ಉಪವಿಭಾಗಾಧಿಕಾರಿಗಳು ಸಾಗರ |
| 2. | ನಾಡಕಛೇರಿ, ಅವಿನಹಳ್ಳಿ | ರಾಜಸ್ವ ನಿರೀಕ್ಷಕರು ಅವಿನಹಳ್ಳಿ ಹೋಬಳಿ | ಗ್ರಾಮಲೆಕ್ಕಾಧಿಕಾರಿ ಸಂಬಂಧಪಟ್ಟ ವೃತ್ತ | ಉಪತಹಶೀಲ್ದಾರ್ ಅವಿನಹಳ್ಳಿ |
| 3. | ನಾಡಕಛೇರಿ, ಸುಳ್ಳಳ್ಳಿ | ರಾಜಸ್ವ ನಿರೀಕ್ಷಕರು, ಕರೂರು ಹೋಬಳಿ | ಗ್ರಾಮಲೆಕ್ಕಾಧಿಕಾರಿ ಸಂಬಂಧಪಟ್ಟ ವೃತ್ತ | ಉಪತಹಶೀಲ್ದಾರ್ ಸುಳ್ಳಳ್ಳಿ. |

4. (ಬಿ) 1 (ಅ) ಸಾಗರ ತಾಲ್ಲೂಕಿನ ಸಾಮಾನ್ಯ ಮಾಹಿತಿಗಳು:

1. ಭೌಗೋಳಿಕ ವಿಸ್ತೀರ್ಣ : 1940 ಚ.ಕಿ.ಮೀ 479407 ಎಕರೆ
2. ಒಟ್ಟು ಜನಸಂಖ್ಯೆ : 200995 (2001ರ ಜನಗಣತಿ)
   1. ಗ್ರಾಮೀಣ ಜನಸಂಖ್ಯೆ : 138294
   2. ನಗರ ಜನಸಂಖ್ಯೆ : 62701
   3. ನಗರ ಪ್ರದೇಶ : 1
   4. ಗಂಡಸರು : 100977
   5. ಹೆಂಗಸರು : 100018
   6. ಪ.ಜಾ : 19308
   7. ಪ.ಪಂ. : 3971
   8. ಲಿಂಗಾನುಪಾತ : 1000:991
   9. ಜನಸಾಂದ್ರತೆ : 104 ಜನ
3. ಶೈಕ್ಷಣಿಕ ಸಂಸ್ಥೆಗಳು
   1. ಲಾ ಕಾಲೇಜು : 01

**4 ಬಿ (1) ಇ : ಕಾರ್ಯವಿಧಾನ:**

1. ತಹಶೀಲ್ದಾರ್, ಸಾಗರ ತಾಲ್ಲೂಕಿನ ಕಂದಾಯ ಆಡಳಿತ ವ್ಯವಸ್ಥೆಯ ಮುಖ್ಯಸ್ಥರಾಗಿದ್ದು, ಕಂದಾಯ ಆಡಳಿತ ಹಾಗೂ ಕಾನೂನು ಸುವ್ಯವಸ್ಥೆಯ ಸಂಪೂರ್ಣ ಅಧಿಕಾರ ಹೊಂದಿದವರಾಗಿರುತ್ತಾರೆ. ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ II ರಂತೆ ತಾಲ್ಲೂಕಿಗೆ ಒಬ್ಬರಂತೆ ತಹಶೀಲ್ದಾರರನ್ನಾಗಿ ನೇಮಕ ಮಾಡಲಾಗಿದೆ. ಕರ್ನಾಟಕ ಭೂ ಕಂದಾಯ ಕಾಯಿದೆ ಮತ್ತು ಕೇಂದ್ರ ಹಾಗೂ ರಾಜ್ಯ ಅಧಿನಿಯಮಗಳಲ್ಲಿ ನಿಯಮಿಸಿದ ಎಲ್ಲಾ ಅಧಿಕಾರ ಮತ್ತು ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದಾರೆ. ತಹಶೀಲ್ದಾರರು ತಾಲ್ಲೂಕಿನ ದಂಡಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದಾರೆ.

4(ಬಿ) I, II

ಕಂದಾಯ ಇಲಾಖೆಯು ಕೆಳಕಂಡ ಸಾಮಾನ್ಯ ಕಾರ್ಯಗಳನ್ನು ಪ್ರಮುಖವಾಗಿ ನಿರ್ವಹಿಸುತ್ತಿದೆ.

ಅ.
1. ಕಾರ್ಯಕಾರಿ ದಂಡಾಧಿಕಾರಿಯ ಕಾರ್ಯನಿರ್ವಹಣೆ.
2. ಸಾರ್ವಜನಿಕ ದೂರು ನಿರ್ವಹಣೆ
3. ಆಹಾರ ಮತ್ತು ನಾಗರೀಕ ಸರಬರಾಜು ಹಾಗೂ ಸಾರ್ವಜನಿಕ ವಿತರಣಾ ವ್ಯವಸ್ಥೆಯ ನಿರ್ವಹಣೆ.
4. ಎಲ್ಲಾ ರೀತಿಯ ಚುನಾವಣೆಗಳನ್ನು ನಡೆಸುವುದು.
5. ಎಲ್ಲಾ ರೀತಿಯ ಗಣತಿ ಕಾರ್ಯಗಳನ್ನು ನಡೆಸುವುದು (ಜನಗಣತಿ, ಜಾನುವಾರು ಗಣತಿ, ಕೃಷಿ ಗಣತಿ, ಆರ್ಥಿಕ ಗಣತಿ)
6. ಜಿಲ್ಲಾಧಿಕಾರಿಗಳ ಪರವಾಗಿ ಶಿಷ್ಟಾಚಾರ ಕಾರ್ಯ ನಿರ್ವಹಣೆ
7. ಪ್ರಕೃತಿ ವಿಕೋಪ, ನೈಸರ್ಗಿಕ ಮತ್ತು ಮಾನವ ನಿರ್ಮಿತ ವಿಕೋಪಗಳಿಂದ ಭಾದಿತರಾದವರಿಗೆ ಪರಿಹಾರ, ಪುನರ್‌ವಸತಿ ಮತ್ತು ಪುನರ್ ನಿರ್ಮಾಣ ಕಾರ್ಯನಿರ್ವಹಣೆ.
8. ವೃದ್ಧಾಪ್ಯ ವೇತನ, ಅಂಗವಿಕಲ ವೇತನ ವಿಧವಾ ವೇತನ, ಸಂಧ್ಯಾ ಸುರಕ್ಷಾ ವೇತನ ಮೊದಲಾದ ಸಾಮಾಜಿಕ ಸುರಕ್ಷತೆಯ ಕ್ರಮಗಳ ನಿರ್ವಹಣೆ.
9. ಆಯುಧ ಕಾಯಿದೆಯಡಿ ಪ್ರಕರಣ ವಿಲೇವಾರಿ
10. ಆದಾಯ, ಜಾತಿ, ವಾಸ್ತವ್ಯದ ಬಗ್ಗೆ ದೃಢಪತ್ರ ನೀಡುವುದು.
11. ನ್ಯಾಯಾಲಯದಲ್ಲಿ ಸರ್ಕಾರಿ ವ್ಯಾಜ್ಯ ನಿರ್ವಹಣೆ.
12. ಸರಕಾರದಿಂದ ಕಾಲಕಾಲಕ್ಕೆ ಜಾರಿಗೆ ಬರುವ ವಿವಿಧ ಯೋಜನೆಗಳ ಮತ್ತು ಕಾರ್ಯಕ್ರಮಗಳ ನಿರ್ವಹಣೆ.

ಆ. **ಕಂದಾಯ ಆಡಳಿತ**
1. ರಾಜ್ಯದಲ್ಲಿನ ಭೂ ದಾಖಲೆಗಳ ನಿರ್ವಹಣೆ ಎಲ್ಲಾ ಜಮೀನುಗಳ ಭೂಮಾಪನ
2. ಭೂಕಂದಾಯ ನೀರು ತೆರಿಗೆ, ಸರ್ಕಾರಿ ಬಾಕಿ ವಸೂಲಾತಿ
3. ಗೋಮಾಳ, ಕೆರೆ ಅಂಗಳ, ಉಪಶಮನಗಳು ಇತ್ಯಾದಿ ಸಾಮುದಾಯಿಕ ಜಮೀನುಗಳನ್ನು ನಿರ್ದಿಷ್ಟ ಉದ್ದೇಶಕ್ಕಾಗಿ ಕಾದಿರಿಸಿದ ಜಮೀನುಗಳ ನಿರ್ವಹಣೆ ಮತ್ತು ಪರಿಸರ ಸಂರಕ್ಷಣೆ.
4. ಅಕ್ರಮ ಸಕ್ರಮ ಸಮಿತಿಗೆ ಪೂರಕ ಮಾಹಿತಿ ಹಾಗೂ ದಾಖಲಾತಿ ನಿರ್ವಹಣೆ.
5. ಭೂ ಸುಧಾರಣೆ ಮತ್ತು ಗಣಿಗಾರಿಕೆ ನಿಬಂಧನೆಗಳ ನಿರ್ವಹಣೆ.
6. ಭೂ ಪರಿವರ್ತನೆ
7. ಜಾತಿ, ಆದಾಯ, ವಾಸ್ತವ್ಯ ದೃಢಪತ್ರ ವಿಲೇವಾರಿ
8. ವೃದ್ಧಾಪ್ಯ ವೇತನ, ಅಂಗವಿಕಲ ವೇತನ, ವಿಧವಾ ವೇತನ, ಸಂಧ್ಯಾಸುರಕ್ಷಾ ವೇತನ ಮೊದಲಾದ ಸಾರ್ವಜನಿಕ ಸುರಕ್ಷತಾ ಕಾರ್ಯಗಳ ಮಂಜೂರಾತಿ
9. ಕರ್ನಾಟಕ ಭೂ ಕಂದಾಯ ಕಾಯ್ದೆಯಡಿಯಲ್ಲಿ ಬರುವ ಎಲ್ಲಾ ವ್ಯವಹಾರಗಳ ನಿರ್ವಹಣೆ.

ಇ. **ಕಾನೂನು ಆಡಳಿತ**

ತಹಶೀಲ್ದಾರರು ಹೊಂದಿರುವ ಅಧಿಕಾರದ ಮುಖ್ಯ ಕಾಯ್ದೆಗಳ ಮತ್ತು ಕಾನೂನುಗಳ ವಿವರ
1. ಕರ್ನಾಟಕ ಭೂ ಸುಧಾರಣಾ ಕಾಯ್ದೆ ಅಧಿನಿಯಮ 1961 ಮತ್ತು ನಿಯಮಾವಳಿ 1974
2. ಕರ್ನಾಟಕ ಹಲವು ಇನಾಂ ರದ್ದತಿ ಅಧಿನಿಯಮ 1977
3. ಕರ್ನಾಟಕ ಗ್ರಾಮ ನೌಕರಿಗಳ ರದ್ದತಿ ಅಧಿನಿಯಮ 1961
4. ಕರ್ನಾಟಕ ಪುರಸಭೆಗಳ ಅಧಿನಿಯಮ 1964
5. ಕರ್ನಾಟಕ ಕೃಷಿ ಸಾಲ ಕಾರ್ಯಾಚರಣೆ ಮತ್ತು ಇತರೆ ಉಪಬಂಧಗಳ ಅಧಿನಿಯಮ 1974 ಮತ್ತು ನಿಯಮಾವಳಿ 1975
6. ಕರ್ನಾಟಕ ವೃದ್ಧಾಪ್ಯ ವೇತನ ನಿಯಮಾವಳಿ
7. ನಿರ್ಗತಿಕ ವಿಧವಾ ವೇತನ ನಿಯಮಾವಳಿ
8. ದೈಹಿಕ ಅಂಗವಿಕಲರಿಗೆ ನಿರ್ವಹಣಾ ಭತ್ಯೆ ಮಂಜೂರಿ ನಿಯಮಾವಳಿ
9. ಕರ್ನಾಟಕ ಋಣ ವಿಮೋಚನಾ ಅಧಿನಿಯಮ
10. ಮತದಾರರ ನೊಂದಣಿ ನಿಯಮಾವಳಿ
11. ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ 1966

12. ಕರ್ನಾಟಕ ನೀರಾವರಿ ಅಧಿನಿಯಮ 1965
13. ಕರ್ನಾಟಕ ನೀರಾವರಿ (ನೀರಿನ ಕರ ಆಕರಣೆ) ನಿಯಮಾವಳಿ 1965
14. ಕರ್ನಾಟಕ ಅರಣ್ಯ ನಿಯಮಾವಳಿ 1969.
15. ಕರ್ನಾಟಕ ಜಾನುವಾರು ಅತಿಕ್ರಮ ಪ್ರವೇಶ ಅಧಿನಿಯಮ 1966
16. ಕರ್ನಾಟಕ ಸಾರ್ವಜನಿಕ ಆವರಣಗಳ ಅಧಿನಿಯಮ 1974 ಮತ್ತು ಅದರಡಿಯ ನಿರ್ವಹಣೆ.

ದಂಡಾಧಿಕಾರಿಯಾಗಿ ತಹಸೀಲ್ದಾರರು ಈ ಕೆಳಗಿನ ಕಾಯ್ದೆಗಳಡಿಯಲ್ಲಿ ಅಧಿಕಾರ ಹಾಗೂ ಕರ್ತವ್ಯಗಳನ್ನು ಹೊಂದಿರುತ್ತಾರೆ.

1. ದಂಡಾ ಪ್ರಕ್ರಿಯೆ ಸಂಹಿತೆ 1974
2. ಭಾರತ ಸಾಕ್ಷ್ಯ ಅಧಿನಿಯಮ 1963
3. ಕರ್ನಾಟಕ ಪೊಲೀಸ್ ಅಧಿನಿಯಮ 1963
4. ಜೀತದಾಳು ಪದ್ಧತಿ (ನಿರ್ಮೂಲನೆ) ಅಧಿನಿಯಮ 1976
5. ಪ್ರಮಾಣ ವಚನ ಅಧಿನಿಯಮ 1999
6. ಭಾರತೀಯ ಮುದ್ರಾಂಕ ಅಧಿನಿಯಮ 1899
7. ಪ್ರಾಣಿಗಳ ಹಿಂಸೆ ಅಧಿನಿಯಮ 1960
8. ಕರ್ನಾಟಕ ಭಿಕ್ಷಾಟನಾ ಅಧಿನಿಯಮ 1975
9. ಸಾರ್ವಜನಿಕ ಆರೋಗ್ಯ ಅಧಿನಿಯಮ 1944
10. ಕರ್ನಾಟಕ ಮಾರಾಟ ಕರ ಅಧಿನಿಯಮ 1957
11. ಪ.ಜಾತಿ:ಪ.ವರ್ಗಗಳ (ದೌರ್ಜನ್ಯ ನಿಷೇಧ) ಅಧಿನಿಯಮ 1969
12. ಕರ್ನಾಟಕ ಆಹಾರ ಮತ್ತು ನಾಗರೀಕ ಪೂರೈಕೆ ಅಧಿನಿಯಮ
13. ಮುಜರಾಯಿ ಇಲಾಖೆಗೆ ಸೇರಿದ ದೇವಸ್ಥಾನಗಳ ನಿರ್ವಹಣೆ.

**4 ಬಿ (1) ರಲ್ಲಿ II**

ತಾಲ್ಲೂಕು ಕಛೇರಿಯ ಅಧಿಕಾರಿಗಳ ಮತ್ತು ನೌಕರರ ಅಧಿಕಾರಿಗಳ ಮತ್ತು ಕರ್ತವ್ಯದ ವಿವರಗಳು.

ತಹಶೀಲ್ದಾರ್

**1. ತಾಲ್ಲೂಕು ಶಿರಸ್ತೇದಾರ್**
- ಎ. ಪ್ರಥಮದರ್ಜೆ ಸಹಾಯಕರು
- ಬಿ. ದ್ವಿತೀಯ ದರ್ಜೆ ಸಹಾಯಕರು
- ಸಿ. ಬೆರಳಚ್ಚುಗಾರರು
- ಡಿ. ವಾಹನ ಚಾಲಕರು
- ಇ. ದಫೇದಾರ್
- ಎಫ್. ಜವಾನರು

**2. ಹಕ್ಕುದಾಖಲೆ ಶಿರಸ್ತೇದಾರ್**
- ಎ. ಪ್ರಥಮ ದರ್ಜೆ ಸಹಾಯಕರು
- ಬಿ. ದ್ವಿತೀಯ ದರ್ಜೆ ಸಹಾಯಕರು
- ಸಿ. ದಫ್ತರ್ ಬಂದ್
- ಡಿ. ಜವಾನರು
- ಇ. ರಾಜಸ್ವ ನಿರೀಕ್ಷಕರು
- ಎಫ್. ಗ್ರಾಮಲೆಕ್ಕಿಗರು
- ಜಿ. ಕಂಪ್ಯೂಟರ್ ಆಪರೇಟರ್ಸ್

**3. ಚುನಾವಣೆ ಶಿರಸ್ತೇದಾರ್**
- ಎ. ಪ್ರಥಮ ದರ್ಜೆ ಸಹಾಯಕರು
- ಬಿ. ದ್ವಿತೀಯ ದರ್ಜೆ ಸಹಾಯಕರು

**4. ಆಹಾರ ಶಿರಸ್ತೇದಾರ್**
- ಎ. ಆಹಾರ ನಿರೀಕ್ಷಕರು
- ಬಿ. ದ್ವಿತೀಯ ದರ್ಜೆ ಸಹಾಯಕ
- ಸಿ. ವಾಹನ ಚಾಲಕ

**5. ಉಪತಹಶೀಲ್ದಾರ್, ನಾಡಕಛೇರಿ**

ಎ. ದ್ವಿತೀಯ ದರ್ಜೆ ಸಹಾಯಕರು

ಬಿ. ರಾಜಸ್ವ ನಿರೀಕ್ಷಕರು

ಸಿ. ಬೆರಳಚ್ಚುಗಾರರು

ಡಿ. ಜವಾನ

**6. ಪರ್ಯಾವೇಕ್ಷಕರು**

ಎ. ಪ್ರಥಮ ದರ್ಜೆ ಭೂ ಮಾಪಕರು

ಬಿ. ಪ್ರಥಮ ದರ್ಜೆ ಸಹಾಯಕರು

ಸಿ. ದ್ವಿತೀಯ ದರ್ಜೆ ಭೂ ಮಾಪಕರು

ಡಿ. ಜವಾನರು

ಇ. ದಫ್ತರ್ ಬಂದ್

**III 4 ಬಿ (1) III**

ತಾಲ್ಲೂಕು ಕಛೇರಿಯ ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಯ ಮಾರ್ಗಗಳು ಸೇರಿದಂತೆ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಬೇಕಾದ ಕಾರ್ಯವಿಧಾನ:

ತಾಲ್ಲೂಕು ಕಛೇರಿಯಲ್ಲಿ ಅಧಿಕಾರಿಗಳು ಮತ್ತು ಸಿಬ್ಬಂದಿಯ ಅಧಿಕಾರ ಮತ್ತು ಕರ್ತವ್ಯಗಳ ಬಗ್ಗೆ ಕಾಲಕಾಲಕ್ಕೆ ನೀಡಲಾಗುವ ಕಾರ್ಯನಿರ್ವಹಣೆ ಅಧಿಕೃತ ಜ್ಞಾಪನದಲ್ಲಿ ಕಾರ್ಯನಿರ್ವಹಣಾ ಆದೇಶ ಜಾರಿಗೊಳಿಸಿದೆ. ಅಂತೆಯೇ ಸಿಬ್ಬಂದಿ ವರ್ಗದವರು ಕಾರ್ಯನಿರ್ವಹಿಸುತ್ತಿದ್ದಾರೆ.

ಮೇಲೆ ತಿಳಿಸಿರುವ ಎಲ್ಲಾ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗ (ಗ್ರೂಪ್ ಸಿ ಮತ್ತು ಡಿ) ತಹಶೀಲ್ದಾರರ್ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಈ ಕಛೇರಿಯಲ್ಲಿ ನಿರ್ವಹಿಸುವ ಎಲ್ಲಾ ಸಂಬಂಧಿಸಿದ ಶಾಖೆಗಳ ವಿಷಯಗಳಲ್ಲಿ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರಿ ತಹಸೀಲ್ದಾರರಾಗಿರುತ್ತಾರೆ.

1) ಕಾಗದ ಪತ್ರಗಳ ಸ್ವೀಕೃತಿ ವಿಲೇವಾರಿ

ಸಾರ್ವಜನಿಕರಿಂದ, ಅಧೀನ ಕಛೇರಿಗಳಿಂದ ಮತ್ತು ಸರ್ಕಾರ ಹಾಗೂ ಮೇಲಾಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು : ಕಡತಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಾರ್ವಜನಿಕರ ಮನವಿ ಬಗ್ಗೆ ಸ್ಥಳದಲ್ಲೇ ಸ್ವೀಕೃತಿ ಪತ್ರವನ್ನು ನೀಡಿದ ನಂತರ ಕಛೇರಿಯ ತಾಲ್ಲೂಕು ಶಿರಸ್ತೇದಾರ್ ಮುಖಾಂತರ ತಹಸೀಲ್ದಾರರ ಗಮನಕ್ಕೆ ತಂದು ಸ್ವೀಕೃತಿ ಶಾಖೆಯಲ್ಲಿ ದಾಖಲಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಪ್ರತಿ ಕಡತ:ಕಾಗದ ಪತ್ರಗಳನ್ನು ಶಾಖೆವಾರು ಗುರುತಿಸುವಂತೆ ಹಾಕಿದ ನಂತರ ಅಗತ್ಯ ಕ್ರಮಕೈಗೊಳ್ಳಲು ನೀಡಲಾಗುತ್ತದೆ.

**4 ಬಿ (1) 4**

4. ಕಛೇರಿ ಪ್ರಕಾರ್ಯಗಳ ನಿರ್ವಹಣೆಗೆ ರೂಪಿಸಿರುವ ಸೂತ್ರಗಳು

1. ತಹಶೀಲ್ದಾರರ ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ದಾಖಲಿಸಿ ವಿಷಯ ನಿರ್ವಾಹಕರಿಗೆ ನೀಡುವ ವ್ಯವಸ್ಥೆ ಕಲ್ಪಿಸಲಾಗಿದೆ.
2. ಸಾರ್ವಜನಿಕರಿಂದ ಸ್ವೀಕರಿಸಲಾಗುವ ಕಾಗದ ಪತ್ರಗಳಿಗೆ ಸ್ವೀಕೃತಿ ನೀಡುವುದಲ್ಲದೆ ಕಾರ್ಯಗತ ಅವಧಿ ನಿಗದಿಪಡಿಸಿ ತಿಳಿಸಲಾಗುತ್ತಿದೆ.
3. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆ ಬಗ್ಗೆ ಸ್ವೀಕರಿಸಲಾಗುವ ಎಲ್ಲಾ ಮನವಿಗಳನ್ನು ಪ್ರತ್ಯೇಕ ರಿಜಿಸ್ಟರ್‌ನಲ್ಲಿ ನಮೂದಿಸಿ ಕ್ಲಿಪ್ತ ಕಾಲದಲ್ಲಿ ಉತ್ತರ ನೀಡುವುದು.

ಅಧೀನ ಕಛೇರಿಗಳಿಂದ ವರದಿ ಪಡೆಯಲು ಕಾಲಾವಧಿ ನಿಗದಿಪಡಿಸುವುದು. ಇಲಾಖೆಯ ಪ್ರಕಾರ್ಯಗಳ ಪ್ರಗತಿ ಪರಿಶೀಲನೆ ಬಗ್ಗೆ ಪ್ರತೀ ಮಾಹೆಯಲ್ಲಿ ಕಂದಾಯ ನಿರೀಕ್ಷಕರ ಮತ್ತು ಗ್ರಾಮ ಲೆಕ್ಕಿಗರ ಸಭೆ ಕರೆಯಲಾಗುವುದು.

ಕಛೇರಿ ಕೈಪಿಡಿ ನಿಯಮಾವಳಿ ರೀತ್ಯಾ ಕಾಗದ ಪತ್ರಗಳನ್ನು ವಿಷಯ ನಿರ್ವಾಹಕರು ಸ್ವೀಕರಿಸಿ ಗರಿಷ್ಠ 5 ದಿನಗಳೊಳಗಾಗಿ ವಿಷಯ ನಿರ್ವಾಹಕರು ಎಲ್ಲಾ ಸ್ವೀಕರಿಸುವ ಕಾಗದ ಪತ್ರಗಳನ್ನು ವಿಷಯ ನಿರ್ವಾಹಕರ ದಿನಚರಿಯಲ್ಲಿ ನಮೂದಿಸಿಕೊಂಡು ತದನಂತರ ವಿಷಯ ವಹಿಯಲ್ಲಿ ಅನುಕ್ರಮವಾಗಿ ದಾಖಲಿಸಿಕೊಂಡು ಕಡತಗಳಲ್ಲಿ ಟಿಪ್ಪಣಿ ಹಾಕಿ ಮಂಡಿಸುತ್ತಾರೆ. ವಿಷಯ ನಿರ್ವಾಹಕರೆಲ್ಲರೂ ಕಛೇರಿ ಕಾರ್ಯವಿಧಾನ ರೀತ್ಯಾ ಐದು ಕಟ್ಟು ವಿಧಾನ ಅಳವಡಿಸಿ ಕಾರ್ಯ ನಿರ್ವಹಿಸುತ್ತಾರೆ.

ವಿಷಯ ನಿರ್ವಾಹಕರಿಂದ ಬಂದಂತಹ ಎಲ್ಲಾ ಕಡತಗಳ ಪರಿಶೀಲನೆ ಮಾಡಿ ಶಾಖಾ ಮುಖ್ಯಸ್ಥರು ವಿಳಂಬವಾಗದ ರೀತಿ ಕಡತದಲ್ಲಿ ವಿಷಯವಾರು ತೀರ್ಮಾನ ಕೈಗೊಳ್ಳುವ ನಿಟ್ಟಿನಲ್ಲಿ ಸೂಕ್ತ ಅಭಿಪ್ರಾಯದೊಂದಿಗೆ ಸಲ್ಲಿಸುತ್ತಾರೆ.

ಕಡತಗಳಲ್ಲಿ ತೀರ್ಮಾನ ಕೈಗೊಳ್ಳುವ ಬಗ್ಗೆ ಅನುಸರಿಸುವ ಬಗ್ಗೆ ಕಾರ್ಯ ವಿಧವಾ ಕಛೇರಿ ಕೈಪಿಡಿಯ ನಿಯಮಾವಳಿ ರೀತ್ಯ ಕ್ರಮವಹಿಸಲಾಗುತ್ತದೆ.

**4 ಬಿ (1) 5**

**ತಹಸೀಲ್ದಾರರ ನಿಯಂತ್ರಣದಲ್ಲಿರುವ ದಸ್ತಾವೇಜುಗಳ ಪ್ರವರ್ಗಗಳು**

ತಹಸೀಲ್ದಾರರು ಮೇಲೆ ರೂಪಿಸಲಾದ ಕಾಯಿದೆ ನಿಯಮಗಳಡಿ ನಿರ್ವಹಿಸುವ ಎಲ್ಲಾ ಕಡತಗಳಲ್ಲಿ ಅಂತಿಮ ನೀಡಿ ಮುಕ್ತಾಯವಾದ ನಂತರ ಪ್ರತೀ ಕಡತಗಳ ಪ್ರಾಮುಖ್ಯತೆಯನ್ನು ಅನುಸರಿಸಿ ಪ್ರವರ್ಗ 'ಎ' 'ಬಿ' 'ಸಿ' 'ಡಿ' ಮತ್ತು 'ಇ' ಎಂದು ವರ್ಗೀಕರಿಸಿ ನಿರ್ವಹಿಸಲಾಗುತ್ತಿದೆ. ಪ್ರತೀ ವರ್ಗೀಕರಣ ಅವಧಿ ಕೆಳಕಂಡಂತಿರುತ್ತದೆ.

'ಎ' ಡಿಸ್ – ಶಾಶ್ವತ
'ಬಿ' ಡಿಸ್ – 30 ವರ್ಷಗಳು
'ಸಿ' ಡಿಸ್ – 10 ವರ್ಷಗಳು
'ಡಿ' ಡಿಸ್ – 5 ವರ್ಷಗಳು
'ಇ' ಡಿಸ್ – 1 ವರ್ಷಗಳು

4ಬಿ (1) 6 ಕಛೇರಿಯ ಕೆಲಸಕ್ಕಾಗಿ ಉಪಯೋಗಿಸಬೇಕಾದ ವಹಿಗಳು ಮತ್ತು ದಾಖಲೆಗಳು: ಕಛೇರಿಯ ಕೆಲಸದ ಬಗ್ಗೆ ಈ ಕೆಳಗಿನ ವಹಿಗಳನ್ನು ಇಟ್ಟು ಕೆಲಸ ನಿರ್ವಹಿಸಲಾಗುತ್ತದೆ.

1) ಟಪ್ಪಾಲು ವಹಿ
2) ಅರೆ ಸರ್ಕಾರಿ ಪತ್ರಗಳ ಬಗ್ಗೆ ವಹಿ
3) ಚುಕ್ಕೆ ಗುರುತಿನ ಪ್ರಶ್ನೆ ವಹಿ
4) ಹಾಜರಾತಿ ವಹಿ
5) ಚಲನ್ ವಹಿ
6) ಅಕ್ರಮ ಸಕ್ರಮ ಮಂಜೂರಾತಿ ವಹಿ
7) ಮನೆ ನಿವೇಶನ ಮಂಜೂರಾತಿ ವಹಿ
8) ಬಂದೂಕು ಪರವಾನಿಗೆ ವಹಿ
9) ವೃದ್ದಾಪ್ಯ, ವಿಧವಾ, ಅಂಗವಿಕಲ ವೇತನ ವಹಿ
10) ವಿಷಯ ನಿರ್ವಾಹಕರಲ್ಲಿ ವಹಿಗಳು
    ಎ) ದಿನವಹಿ
    ಬಿ) ವಾರವಹಿ
    ಸಿ) ತಿಂಗಳ ಪ್ರಗತಿ ವಹಿ
11) ವಿವಿಧ ಲೆಕ್ಕ ಶೀರ್ಷಿಕೆಗಳಲ್ಲಿ ಸಿಬ್ಬಂದಿ ವೇತನ ವಹಿ
12) ಪ್ರಾಕೃತಿ ವಿಕೋಪ ಪರಿಹಾರ ಮಂಜೂರಾತಿ ವಹಿ
13) ಆರಾಧಾನಾ, ತಸ್ತೀಕ್ ಮಂಜೂರಾತಿ ವಹಿ
14) ಭೂ ಪರಿವರ್ತನಾ ಹಿಂಬರಹ ವಹಿ
15) ಸೇವಾ ವಹಿಯ ಸಂಚಲನ ವಹಿ
16) ಭೂ ಸುಧಾರಣಾ ಮಂಜೂರಾತಿ ವಹಿ

**4 ಬಿ (1) 7**

ಅದರ ಕಾರ್ಯ ನೀತಿಯ ರಚನೆ ಅಥವಾ ಅದರ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರೊಡನೆ ಸಮಾಲೋಚಿಸಲು ಅಥವಾ ಅವರ ಪ್ರಾತಿನಿಧ್ಯವಿರುವಂತೆ ಮಾಡಲು ಇರುವಂಥ ಯಾವುದೇ ವ್ಯವಸ್ಥೆಯ ವಿವರಗಳು.

1. ಅಧೀನ ಕಛೇರಿಗಳಿಂದ ವರದಿ ಪಡೆಯಲು ಕಾಲಾವಧಿ ನಿಗದಿಪಡಿಸುವುದು.
2. ಇಲಾಖೆಯ ಪ್ರಕಾರ್ಯಗಳ ಪ್ರಗತಿ ಪರಿಶೀಲನೆ ಬಗ್ಗೆ ಸಭೆಗಳನ್ನು ಏರ್ಪಡಿಸುವುದು.
3. ಸಾರ್ವಜನಿಕರ ಕುಂದುಕೊರತೆ ಆಲಿಸುವುದು.
4. ಪಾರದರ್ಶಕ ಕಾಯಿದೆ ಅನುಷ್ಠಾನ.
5. ಎಲ್ಲಾ ವರ್ಗದ ಜನರಿಂದ ಸ್ವೀಕರಿಸುವಂತಹ ಅಹವಾಲುಗಳು:

ಸಾರ್ವಜನಿಕರ, ಸಂಘ ಸಂಸ್ಥೆಗಳ ಕುಂದುಕೊರತೆಗಳಿಲ್ಲದೆ ಇನ್ನಿತರ ಸಂಘಟನೆಗಳಿಂದ ನಡೆಸುವ ಪ್ರತಿಭಟನೆಗಳ ಅಹವಾಲುಗಳನ್ನು ಸ್ವೀಕರಿಸಿ ಸಂಬಂಧಿಸಿದವರಿಗೆ ರವಾನಿಸಿ ಮಾಹಿತಿ ಪಡೆದು ಪರಿಹಾರ ಒದಗಿಸುವುದಲ್ಲದೆ ಜಿಲ್ಲಾಧಿಕಾರಿಗಳಿಗೆ

ವರದಿಯನ್ನು ಸಲ್ಲಿಸಲಾಗುತ್ತಿದೆ. ಸಾರ್ವಜನಿಕ ದೂರು ಕೋಶ ಮುಖೇನ ಸ್ವೀಕರಿಸುವ ಅರ್ಜಿಗಳ ಪರಿಶೀಲನೆ ಹಾಗೂ ವಿಲೇವಾರಿ.

**6. ಪ್ರಾಕೃತಿಕ ವಿಕೋಪ:**

ನೈಸರ್ಗಿಕ ವಿಕೋಪಗಳಾದ ಅತಿವೃಷ್ಟೀ ಸೇರಿದಂತೆ ಎಲ್ಲಾ ವಿಕೋಪಗಳ ಬಗ್ಗೆ ನಿಯಮಾನುಸಾರ ಪರಿಹಾರ ನೀಡಲಾಗುತ್ತಿದೆ. ಅಲ್ಲದೆ ಸಾರ್ವಜನಿಕರಿಗೆ ಮನವರಿಕೆ ಅಗತ್ಯವಿದ್ದಲ್ಲಿ ಸಂಕಷ್ಟದ ಮಾಹಿತಿ ಪಡೆಯಲು ಹಾಗೂ ತುರ್ತು ಪರಿಹಾರ ನೀಡಲು ತಾಲ್ಲೂಕು ಕಛೇರಿಯಲ್ಲಿ ಕಂಟ್ರೋಲ್ ರೂಮ್ ತೆರೆಯಲಾಗಿದೆ. ತಾಲ್ಲೂಕು ಕಛೇರಿಯ ದೂರವಾಣಿ ಸಂಖ್ಯೆ 226074 ಆಗಿರುತ್ತದೆ.

7. ಕರ್ನಾಟಕ ಭೂ ಕಂದಾಯ ಕಾಯಿದೆ ಕಲಂ 94ಸಿ ರಡಿ ಸ್ವೀಕರಿಸಿದ ಅರ್ಜಿಗಳ ವಿಲೇವಾರಿ.

**4 ಬಿ (1) 8**

ಮಂಡಳಿ : ಪರಿಷತ್ತು : ಸಮಿತಿಗಳಲ್ಲಿ ಎರಡು ಹಾಗೂ ಅದಕ್ಕಿಂತ ಹೆಚ್ಚಿನ ವ್ಯಕ್ತಿಗಳಿಂದ ರಚಿಸಲಾದ ಸಮಿತಿಯ ಸಲಹೆ ಹಾಗೂ ಸರ್ಕಾರದ ನಡವಳಿಗಳು.

ಕಛೇರಿಯಲ್ಲಿ ಸರ್ಕಾರದ ಆದೇಶದಂತೆ ಅಕ್ರಮ ಸಕ್ರಮೀಕರಣ ಸಮಿತಿ ಭೂ ನ್ಯಾಯ ಮಂಡಳಿಯ ಸಮಿತಿ, ಆರಾಧನಾ ಸಮಿತಿಗಳು ರಚನೆಯಾಗಿ ಕೆಲಸ ನಿರ್ವಹಿಸಲಾಗುತ್ತದೆ.

**4ಬಿ (1) 9 : 10**

ತಾಲ್ಲೂಕು ಕಛೇರಿಯ ಅಧಿಕಾರಿಗಳ ಮತ್ತು ನೌಕರರ ಮಾಹಿತಿ ಪುಸ್ತಕ ಮತ್ತು ವೇತನ ವಿವರ.

ತಹಸೀಲ್ದಾರರು ಕಛೇರಿಯ ಮುಖ್ಯಸ್ಥರಾಗಿದ್ದು ಕಛೇರಿಯ ಮುಖ್ಯಸ್ಥರಿಗೆ ಸರ್ಕಾರ ಇಲ್ಲವೇ ಇಲಾಖೆ ನೀಡಿದ ಹಕ್ಕುಬಾಧ್ಯತೆಗಳಿಗನುಗುಣವಾಗಿ ಕರ್ತವ್ಯ ನಿರ್ವಹಣೆ.

| ಕ್ರ. ಸಂ. | ಅಧಿಕಾರಿ : ನೌಕರರ ಪದನಾಮ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| 1 | ತಹಸೀಲ್ದಾರ್ | 11400–21600 | 1 |
| 2 | ಶಿರಸ್ತೇದಾರ್ | 10000–18150 | 5 |
| 3 | ಉಪತಹಸೀಲ್ದಾರ್ | 10000–18150 | 2 |
| 4 | ಪ್ರಥಮ ದರ್ಜೆ ಸಹಾಯಕರು | 7275–13350 | 5 |
| 5 | ಪ್ರಥಮ ದರ್ಜೆ ರಾಜಸ್ವ ನಿರೀಕ್ಷಕರು:<br>ಪ್ರಥಮ ದರ್ಜೆ ಆಹಾರ ನಿರೀಕ್ಷಕರು | 7275–13350 | 8 |
| 6 | ಪ್ರಥಮ ದರ್ಜೆ ಭೂ ಮಾಪಕರು | 7275–13350 | 1 |
| 7 | ಬೆರಳಚ್ಚುಗಾರರು | 5800–10500 | 3 |
| 8 | ದ್ವಿತೀಯ ದರ್ಜೆ ಸಹಾಯಕರು | 5800–10500 | 13 |
| 9 | ದ್ವಿತೀಯ ದರ್ಜೆ ಭೂ ಮಾಪಕರು | 5800–10500 | 9 |
| 10 | ಗ್ರಾಮಲೆಕ್ಕಿಗರು | 5800–10500 | 37 |
| 11 | ದಫೇದಾರ್ | 5200–8200 | 1 |
| 12 | ಅಟೆಂಡರ್ | 5200–8200 | 1 |
| 13 | ವಾಹನ ಚಾಲಕರು | 5800–10500 | 2 |
| 14 | ಜವಾನರು | 4800–7275 | 9 |
| 15 | ಬಾಂಡ್ ಜವಾನರು | 4800–7275 | 9 |
| | | **ಒಟ್ಟು** | **108** |

ಬಿ (1) 11 2008–09ನೇ ಸಾಲಿನ ಆಯವ್ಯಯದ ಬಗ್ಗೆ ಟಿಪ್ಪಣಿ

ಸಾಗರ ತಾಲ್ಲೂಕಿಗೆ ಸಂಬಂಧಿಸಿದಂತೆ 2008–09ನೇ ಸಾಲಿನ ಆಯವ್ಯಯದ ಅಂದಾಜು ಈ ಕೆಳಗಿನಂತಿರುತ್ತದೆ.

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ವಿವರ | ಆಯವ್ಯಯ ಅಂದಾಜು |
|---|---|---|---|
| 1 | 2015–00–102–0–01 | ವೇತನ ಮತ್ತು ಭತ್ಯೆ | ರೂ. 233610–00 |
| 2 | 2053–00–094–7–01 | ವೇತನ ಮತ್ತು ಭತ್ಯೆ | ರೂ. 4701600–00 |
| 3 | 2053–00–094–7–01 | ವೇತನ ಮತ್ತು ಭತ್ಯೆ | ರೂ. 900000–00 |
| 4 | 2053–00–094–7–01 | ವೇತನ ಮತ್ತು ಭತ್ಯೆ | ರೂ. 573100–00 |

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ವಿವರ | ಆಯವ್ಯಯ ಅಂದಾಜು |
|---|---|---|---|
| 5 | 2506–00–101–1–01 | ವೇತನ ಮತ್ತು ಭತ್ಯೆ | ರೂ.105600–00 |
| 6 | 2011–02–101–0–09 | ವೇತನ ಮತ್ತು ಭತ್ಯೆ | ರೂ. 223100–00 |
| 7 | 2053–00–094–7–01 | ವೇತನ ಮತ್ತು ಭತ್ಯೆ | ರೂ. 231800–00 |
| 8 | 2029–00–101–1–01 | ವೇತನ ಮತ್ತು ಭತ್ಯೆ | ರೂ. 4213477–00 |
| 9 | 2515–00–101–0–17 | ವೇತನ ಮತ್ತು ಭತ್ಯೆ | ರೂ. 29565–00 |
| | | | **ಒಟ್ಟು ರೂ. 11211852–00** |

4 ಬಿ (1) 14 ಕಛೇರಿಯಲ್ಲಿರುವ ಮಾಹಿತಿಯನ್ನು ವೆಬ್‌ಸೈಟ್‌ನಲ್ಲಿ ನೀಡಿರುವ ಬಗ್ಗೆ ವಿವರ ಕಛೇರಿಯಲ್ಲಿ ಪಹಣಿ ಮತ್ತು ಖಾತಾ ಬದಲಾವಣೆಗೆ ಸಂಬಂಧಿಸಿದಂತೆ ಕಿಯೋನಿಕ್ಸ್ ಕೇಂದ್ರ ತೆರೆಯಲಾಗಿದ್ದು ಜನರಿಗೆ ಪಹಣಿ ಪತ್ರಗಳನ್ನು ನೀಡಲಾಗುತ್ತಿದೆ.

4ಬಿ (1) 15

ಸಾರ್ವಜನಿಕರಿಗೆ ಮಾಹಿತಿಯನ್ನು ನೀಡಲು ಲಭ್ಯವಿರುವ ಸುತ್ತೋಲೆಗಳು ಹಾಗೂ ಗ್ರಂಥಾಲಯಗಳು ಮತ್ತು ವಾಚನಾಲಯಗಳು ಇದ್ದಲ್ಲಿ ಅದರ ವಿವರ

ಕಛೇರಿಯಲ್ಲಿ ಪ್ರತೀ ವಿಷಯಕ್ಕೆ ಸಂಬಂಧಿಸಿದಂತೆ ಸುತ್ತೋಲೆಗಳು ಇರುತ್ತದೆ. ಗ್ರಂಥಾಲಯ ಇರುವುದಿಲ್ಲ.

4ಬಿ (1) 16

ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರುಗಳು ಪದನಾಮಗಳು ಮತ್ತು ಇತರೆ ವಿವರಗಳು

**ಅಧಿಸೂಚನೆ**

ಭಾರತ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ ಪ್ರಕರಣ ಕಲಂ 4(1) (ಬಿ) ಅನುಸಾರ ಪ್ರಕಟಿಸಬೇಕಾದ ವಿವರಗಳು

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2005ರ (ಸೆಂಟ್ರಲ್ ಆಕ್ಟ್ 22 ಆಫ್ 2005) ಸೆಕ್ಷನ್ 5(1) 5(2) ಮತ್ತು 19(1)ರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಂದಾಯ ಇಲಾಖೆಗೆ ಸೇರಿದ ತಾಲ್ಲೂಕು ಕಛೇರಿಯ ಮಾಹಿತಿಯನ್ನು ಕೋರುವ ವ್ಯಕ್ತಿಗಳ ಅಂತಹ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು ಮಾಹಿತಿ ಕೋರುವ ಅರ್ಜಿಗಳು ಅಥವಾ ಮೇಲ್ಮನವಿ ಪ್ರಾಧಿಕಾರಿಗಳನ್ನಾಗಿ ಈ ಕೆಳಕಂಡಂತೆ ಸರ್ಕಾರದಿಂದ ನೇಮಿಸಲಾಗಿದೆ.

| ಕ್ರ. ಸಂ. | ಕಛೇರಿಯ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005 (1)ರ ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯಲು ಹಕ್ಕು ಕಾಯ್ದೆ 2005ರ ಸೆ5(2)ರ ಪ್ರಕಾರ ಸಹಾಯಕ ಸಾರ್ವ.ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆ19 (1)ರ ಪ್ರಕಾರ ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 1 | ತಾಲ್ಲೂಕು ಕಛೇರಿ | ತಹಸೀಲ್ದಾರ್ | ಶಿರಸ್ತೇದಾರ್ (ವಿಷಯವಾರು) ಪರ್ಯಾವೇಕ್ಷಕರು | ಉಪವಿಭಾಗಾಧಿಕಾರಿಗಳು ಸಾಗರ. |
| 2 | ನಾಡಕಛೇರಿ, ಅವಿನಹಳ್ಳಿ | ರಾಜಸ್ವ ನಿರೀಕ್ಷಕರು ಆವಿನಹಳ್ಳಿ ಹೋಬಳಿ | ಗ್ರಾಮಲೆಕ್ಕಾಧಿಕಾರಿ (ಸಂಬಂಧಪಟ್ಟ ವೃತ್ತ) | ಉಪತಹಸೀಲ್ದಾರ್ ಆವಿನಹಳ್ಳಿ |
| 3 | ನಾಡಕಛೇರಿ, ಸುಳ್ಳಳ್ಳಿ | ರಾಜಸ್ವ ನಿರೀಕ್ಷಕರು ಕರೂರು ಹೋಬಳಿ | ಗ್ರಾಮಲೆಕ್ಕಾಧಿಕಾರಿ (ಸಂಬಂಧಪಟ್ಟ ವೃತ್ತ) | ಉಪತಹಸೀಲ್ದಾರ್ ಸುಳ್ಳಳ್ಳಿ |

**4 ಬಿ (1) 17**

ನಿರ್ದಿಷ್ಟಪಡಿಸಬಹುದಾದ ಇತರ ಮಾಹಿತಿಗಳು

ಕಛೇರಿಯಲ್ಲಿ ಸಾರ್ವಜನಿಕರ ಕುಂದು ಕೊರತೆಗಳ ಬಗ್ಗೆ ಅರ್ಜಿಗಳನ್ನು ಪಡೆದು ಸೂಕ್ತ ಹಿಂಬರಹ ಮೂಲಕ ಅರ್ಜಿದಾರರಿಗೆ ಮಾಹಿತಿ ನೀಡಲಾಗುತ್ತಿದೆ.

ದಸ್ತಾವೇಜು ಪ್ರತಿಗಳನ್ನು ಆದೇಶದ ನಕಲುಗಳನ್ನು ಪಡೆಯಲು ಇಚ್ಛಿಸಿದಲ್ಲಿ ಅರ್ಜಿಯನ್ನು ಸಲ್ಲಿಸಿ ಇದಕ್ಕಾಗಿ ನಿಗದಿಪಡಿಸಿದ ಶುಲ್ಕವನ್ನು ತುಂಬ ಗರಿಷ್ಠ 7 ದಿನಗಳ ಒಳಗಾಗಿ ನಕಲು ಪ್ರತಿಗಳನ್ನು ಪಡೆಯುವ ಸೌಲಭ್ಯವನ್ನು ಒದಗಿಸಿಕೊಡಲಾಗಿದೆ.

ವಹಿಗಳಲ್ಲಿ ನಮೂದಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ಪತ್ರಗಳನ್ನು ನೀಡಲಾಗುವುದು. ಹಾಗೂ ಸಾರ್ವಜನಿಕ ಮನವಿ ಬಗ್ಗೆ ಪ್ರತ್ಯೇಕ ಸ್ವೀಕೃತಿ ಪತ್ರವನ್ನು ನೀಡಲಾಗುತ್ತದೆ.

**ಶಿರಸ್ತೇದಾರರು:**

ತಾಲ್ಲೂಕು ಕಛೇರಿಯಲ್ಲಿ ಸಿಬ್ಬಂದಿ ಮತ್ತು ಲೆಕ್ಕ ಪತ್ರ, ಚುನಾವಣೆ, ಕಂದಾಯ, ಕಾನೂನು, ಶಿಷ್ಟಾಚಾರ, ಸ್ವೀಕೃತಿ ಮತ್ತು ರವಾನೆ ಶಾಖೆಗೆ ಶಿರಸ್ತೇದಾರರು ಇರುತ್ತಾರೆ. ಅವರಿಗೆ ವಹಿಸಲಾದ ಶಾಖೆಯ ಮೇಲ್ವಿಚಾರಣೆ ಮಾಡುತ್ತಾರೆ. ಇವರುಗಳು ಕಛೇರಿಯ ಅಧಿಕಾರಿಗಳಿಗೆ ಅಧೀನ ಸಿಬ್ಬಂದಿಗಳಾಗಿ ಕಾರ್ಯನಿರ್ವಹಿಸುತ್ತಾರೆ.

ಕಛೇರಿಯ ಸಿಬ್ಬಂದಿಗಳ ಸಂಕಲನ ಕರ್ತವ್ಯ ನಿರ್ವಹಣೆಗಳು, ಸಿಬ್ಬಂದಿ ನೇಮಕಾತಿ : ಶಿಸ್ತಿನ ಕ್ರಮ ಕಾರ್ಯನಿರ್ವಹಣೆ:

ತಾಲ್ಲೂಕು ವ್ಯಾಪ್ತಿಯ ಎಲ್ಲಾ ಅಧೀನ ಕಾರ್ಯಾಲಯಗಳು ಮತ್ತು ನಾಡಕಛೇರಿಗಳ ನಿರ್ವಹಣೆ ಮಾಡಲಾಗುವುದು. ಗ್ರಾಮ ಸಹಾಯಕರ ನೇಮಕ: ವರ್ಗಾವಣೆಗಳನ್ನು ನಡೆಸುವುದು.

**ನೈಸರ್ಗಿಕ ವಿಕೋಪ**

ಬರ ಮತ್ತು ಅತಿವೃಷ್ಟಿಗಳು ಸಂಭವಿಸಿದಾಗ ತುರ್ತು ರಕ್ಷಣಾ ಕ್ರಮಗಳನ್ನು ಜರುಗಿಸುವುದು ಮತ್ತು ಸಂತ್ರಸ್ತರಿಗೆ ಪರಿಹಾರ ನೀಡಲಾಗುವುದು. ಸಿಡಿಲು ಬಡಿದು ಮೃತಪಟ್ಟು ಕುಟುಂಬದವರಿಗೆ ಪರಿಹಾರ ನೀಡಲು ಮತ್ತು ಬೆಂಕಿ ಆಕಸ್ಮಿಕ ಸಂಭವಿಸಿದಾಗ ಕ್ರಮಕೈಗೊಳ್ಳಲಾಗುತ್ತಿದೆ.

**ಭೂ ಮಂಜೂರಾತಿ:**

ಕಛೇರಿಯಲ್ಲಿ ಭೂ ಮಂಜೂರಾತಿಯ ಪ್ರಕರಣಗಳಿಗೆ ಸಂಬಂಧಿಸಿದಂತೆ ತನಿಖೆ ನಡೆಸಿ ಮೇಲಾಧಿಕಾರಿಗಳಿಗೆ ವರದಿ ಒಪ್ಪಿಸುವುದು. ಅಕ್ರಮ ಸಕ್ರಮದ ಸಮಿತಿಗಳಲ್ಲಿ ಮಂಜೂರಾದ ಪ್ರಕರಣಗಳಿಗೆ ಹಕ್ಕು ಪತ್ರ ನೀಡಲಾಗುತ್ತಿದೆ. ಸರ್ಕಾರಿ ಜಮೀನು ಅನಧಿಕೃತ ಅತಿಕ್ರಮಣ ಮಾಡಿರುವುದನ್ನು ಕ್ರಮ ಜರುಗಿಸಿ ತೆರವುಗೊಳಿಸಲಾಗುವುದು.

**ಭೂ ಸ್ವಾಧೀನ**

ಭೂ ಸ್ವಾಧೀನತೆಯ ಪ್ರಕರಣಗಳ ಬಗ್ಗೆ ತನಿಖೆ ನಡೆಸಿ ಮೇಲಾಧಿಕಾರಿಗಳಿಗೆ ವರದಿ ಒಪ್ಪಿಸಲಾಗುವುದು.

**ಭೂ ಸುಧಾರಣೆ:**

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರಲ್ಲಿ ಅವಕಾಶವಿದ್ದಂತೆ ಕಲಂ 48ರಡಿಯಲ್ಲಿ ನೇಮಕವಾದ ಭೂ ಸುಧಾರಣಾ ಸಮಿತಿಗೆ ಕಾರ್ಯದರ್ಶಿಯಾಗಿ ಕಾನೂನಿನ ಪರಿಮಿತಿಯಲ್ಲಿ ಕೆಲಸ ನಿರ್ವಹಿಸುವುದು.

**ಬೇಡಿಕೆ ವಸೂಲಿ ಬಾಕಿ (ಡಿ ಸಿ ಬಿ)**

ಕೃಷಿ ಜಮೀನುಗಳ ಹಿಡುವಳಿಗಳ ಮೇಲೆ ನಿಗದಿಪಡಿಸಿದ ಕಂದಾಯ ನೀರಾವರಿ ಕರ ಮತ್ತು ಇತರ ಕಂದಾಯಗಳ ಬೇಡಿಕೆ ಪಟ್ಟಿ ತಯಾರಿಸುವುದು, ವಸೂಲಿ ಮತ್ತು ಬಾಕಿಗಳ ನಿರ್ವಹಣೆ ಕೈಗೊಳ್ಳುವುದು. ಸರ್ಕಾರದ ಇತರೆ ಇಲಾಖೆಗಳಿಂದ ವಸೂಲಿ ಮಾಡದೆ ಇರುವ ತೆರಿಗೆಗಳ ಬಾಕಿಗಳು ಮತ್ತು ಸಾಲಗಳನ್ನು ಬಾಕಿ ಇರುವ ಮೊತ್ತವನ್ನು ಭೂ ಕಂದಾಯ ಬಾಕಿ ಎಂದು ಪರಿವರ್ತಿಸಿ ವಸೂಲಿ ಕ್ರಮ ಜರುಗಿಸುವುದು.

ಗಣಿಗಾರಿಕೆಗೆ ಸಂಬಂಧಿಸಿದಂತೆ ಪ್ರಕರಣಗಳ ತನಿಖೆ ನಡೆಸಿ ಮೇಲಾಧಿಕಾರಿಗಳಿಗೆ ವರದಿ ಒಪ್ಪಿಸುವುದು.

**ಜಮಾಬಂದಿ**

ಎಲ್ಲಾ ಕಂದಾಯ ಗ್ರಾಮಗಳ ಜಮೀನುಗಳಿಗೆ ಸಂಬಂಧಿಸಿದಂತೆ ವಾರ್ಷಿಕ ಕಂದಾಯ ನಿಗದಿ ವಸೂಲಾತಿ ಮತ್ತು ಬಾಕಿ ವಿವರಗಳನ್ನೊಳಗೊಂಡಂತೆ ಹಾಗೂ ಭೂಕಂದಾಯ ಮಾಡುವ ಮತ್ತು ಸರ್ಕಾರಿ ಜಮೀನುಗಳ ವಿವರಗಳನ್ನೊಳಗೊಂಡಂತೆ ವಾರ್ಷಿಕ ಜಮಾಬಂದಿ ನಡೆಸಲಾಗುವುದು.

ಹುಜೂರು ಜಮಾಬಂದಿಗೆ ಸಂಬಂಧಿಸಿದಂತೆ ಟಿಪ್ಪಣಿ ತಯಾರಿಸಿ ಸಹಾಯಕ ಕಮೀಷನರ್, ಸಾಗರ ಅಥವಾ ಶಿವಮೊಗ್ಗ ಜಿಲ್ಲಾಧಿಕಾರಿಗಳಿಗೆ ಒಪ್ಪಿಸುವುದು.

**ದೇವಸ್ಥಾನ: ವಕ್ಫ್**

ಧಾರ್ಮಿಕ ಮತ್ತು ದತ್ತಿ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಬರುವ ಎಲ್ಲಾ ದೇವಸ್ಥಾನ ಮತ್ತು ಧಾರ್ಮಿಕ ಸಂಸ್ಥೆಗಳಿಗೆ ಜಿಲ್ಲಾಧಿಕಾರಿಗಳಿಂದ ಬಿಡುಗಡೆಯಾದ ತಸ್ತೀಕ್ ಭತ್ಯೆ ಪಾವತಿಸುವುದು.

ಆರಾಧನಾ ಯೋಜನೆಯಡಿಯಲ್ಲಿ ತಾಲ್ಲೂಕು ಮಟ್ಟದ ಸಮಿತಿಯನ್ನು ಕರೆದು ಧಾರ್ಮಿಕ ಸಂಸ್ಥೆಗಳಿಗೆ ಅನುದಾನದ ಬಗ್ಗೆ ಶಿಫಾರಸ್ಸು ಪಡೆದು ಪ್ರಸ್ತಾವನೆಯನ್ನು ಜಿಲ್ಲಾಧಿಕಾರಿಗಳಿಗೆ ಒಪ್ಪಿಸುವುದು. ಅನುದಾನ ಮಂಜೂರಾಗಿ ಬಂಧ ಧಾರ್ಮಿಕ ಸಂಸ್ಥೆಗಳಿಗೆ ಹಣ ಪಾವತಿಸಿ ಬಳಕೆ ಪ್ರಮಾಣ ಪತ್ರಗಳನ್ನು ಜಿಲ್ಲಾಧಿಕಾರಿಗಳಿಗೆ ಒಪ್ಪಿಸುವುದು.

**ಲೆಕ್ಕಪತ್ರ**

ಕಛೇರಿಯ ಸಿಬ್ಬಂದಿ ವೇತನ, ಪ್ರವಾಸ ಭತ್ಯೆ, ಸಾದಿಲ್ವಾರು ವೆಚ್ಚ, ವಾಹನಗಳ ಇಂಧನ ಮತ್ತು ದುರಸ್ತಿ ವೆಚ್ಚಗಳಿಗೆ ಮಂಜೂರಾದ ಹಣದ ಬಗ್ಗೆ ಬೆಲೆಗಳ ತಯಾರಿಕೆ ಮತ್ತು ಮೇಲಾಧಿಕಾರಿಗಳಿಗೆ ವರದಿ ಒಪ್ಪಿಸುವುದು.

**ಚುನಾವಣೆ**

ಕೇಂದ್ರ ಚುನಾವಣಾ ಆಯೋಗದಿಂದ ನಿಗದಿಪಡಿಸಿದ ಲೋಕಸಭೆ ಚುನಾವಣೆ ಮತ್ತು ವಿಧಾನಸಭೆ ಚುನಾವಣೆ ಹಾಗೂ ರಾಜ್ಯ ಸರ್ಕಾರದ ಸ್ಥಳೀಯ ಸಂಸ್ಥೆ ಚುನಾವಣೆಗಳಾದ ತಾಲ್ಲೂಕು ಪಂಚಾಯತ್, ಗ್ರಾಮ ಪಂಚಾಯತ್, ನಗರ ಪಂಚಾಯತ್ ಚುನಾವಣೆ ಕಾರ್ಯಸೂಚಿ ಪ್ರಕಾರ ಚುನಾವಣೆ ಕಾರ್ಯಕ್ರಮಗಳನ್ನು ರೂಪಿಸುವುದು. ಚುನಾವಣೆಗೆ ಸಂಬಂಧಿಸಿದ ಅವ್ಯವಹಾರಗಳ ನಿರ್ವಹಣೆ ಮತ್ತು ಮತದಾರರಿಗೆ ಗುರುತು ಚೀಟಿ ನೀಡುವುದು ಹಾಗೂ ಮತದಾರರ ಪಟ್ಟಿಯ ನಿರ್ವಹಣೆ ಮಾಡುವುದು.

ಸಾರ್ವಜನಿಕರ ಕುಂದುಕೊರತೆಗಳ ಬಗ್ಗೆ ಜಿಲ್ಲಾಧಿಕಾರಿಗಳಿಂದ ಬಂದ ಪತ್ರಕ್ಕೆ ಸಂಬಂಧಿಸಿದಂತೆ ತನಿಖೆ ನಡೆಸಿ ಜಿಲ್ಲಾಧಿಕಾರಿಗಳಿಗೆ ವರದಿ ಒಪ್ಪಿಸುವುದು.

| ಕ್ರ. ಸಂ. | ನೌಕರರ ಹೆಸರು | ಹುದ್ದೆ | ನಿರ್ವಹಿಸುತ್ತಿರುವ ಶಾಖೆ |
|---|---|---|---|
| 1 | ಎಂ. ಲಿಂಗರಾಜು | ತಾಲ್ಲೂಕು ಶಿರಸ್ತೇದಾರ್<br>– ಖಾಲಿ –<br>ಹಾಲಿ ಪ್ರಭಾರ | 1) ಕಛೇರಿ ಆಡಳಿತ ಶಾಖೆಯ ಮೇಲ್ವಿಚಾರಣೆ<br>2) ಸಾರ್ವಜನಿಕ ಕುಂದುಕೊರತೆ<br>3) ಮಾಹಿತಿ ಹಕ್ಕು<br>4) ಕಛೇರಿ ಹಣಕಾಸಿನ ನಿರ್ವಹಣೆ |
| 2 | ಕೆ ಎಸ್ ಜ್ಞಾನಪ್ಪ | ಹಕ್ಕುದಾಖಲೆ ಶಿರಸ್ತೇದಾರ್<br>– ಖಾಲಿ –<br>ಹಾಲಿ ಪ್ರಭಾರ | 1) ಹಕ್ಕು ದಾಖಲೆ ಶಾಖೆ<br>ಭೂಮಿ ಕಂಪ್ಯೂಟರ್ ಶಾಖೆ<br>2) ದಾಖಲೆ ಕೊಠಡಿ<br>3) ಭೂ ಸುಧಾರಣೆ<br>4) ಭೂ ಮಂಜೂರಾತಿ<br>5) ಬಗರ್ ಹುಕುಂ ಶಾಖೆಗಳ ಮೇಲ್ವಿಚಾರಣೆ |
| 3 | ಕೆ ಎಸ್ ಜ್ಞಾನಪ್ಪ | ಚುನಾವಣೆ ಶಿರಸ್ತೇದಾರ್ | 1) ಎಲ್ಲಾ ಚುನಾವಣೆಗಳ ಮತ್ತು ಚುನಾವಣಾ ಶಾಖೆಯ ಮೇಲ್ವಿಚಾರಣೆ |
| 4 | ಎ. ಬಸವರಾಜ್ | ಆಹಾರ ಶಿರಸ್ತೇದಾರ್ | 1) ಆಹಾರ ಶಾಖೆಯ ಮೇಲ್ವಿಚಾರಣೆ |
| 5 | ಎಸ್ ಡಿ ಸತ್ಯನಾರಾಯಣ | ಪ್ರ ದ ಸ | ಸ್ಥಳೀಯ ಸಂಸ್ಥೆಗಳ ಚುನಾವಣೆ ವಿಷಯ ನಿರ್ವಾಹಕರು |
| 6 | ಜಿ. ದಾಸಪ್ಪ | ಪ್ರ ದ ಸ | ಹಕ್ಕು ದಾಖಲೆ ಶಾಖೆ ಮತ್ತು ಭೂಮಿ ಶಾಖೆಗೆ ಸಂಬಂಧಿಸಿದಂತೆ ನಿರ್ವಹಣೆ |
| 7 | ವಿ. ಪದ್ಮಿನಿ | ಪ್ರ ದ ಸ | 1) ಭೂ ಮಂಜೂರಾತಿ 2) ಡಿ ಸಿ ಬಿ |
| 8 | ಎಂ ಕೆ ಮೋಹನ್ | ಪ್ರದಸ | ಸರ್ವೆ ಶಾಖೆಯ ಸಿಬ್ಬಂದಿ ವಿಷಯ ನಿರ್ವಾಹಕರು |
| 9 | ಎಸ್ ಡಿ ಪುಷ್ಪ | ಪ್ರದಸ | ಆಮದು ಶಾಖೆ |
| 10 | ಎನ್ ಆರ್ ನಾರಾಯಣ | ಪ್ರ ದ ಭೂ ಮಾಪಕರು | ಪರ್ಯಾವೇಕ್ಷಕರು ಪ್ರಭಾರ ಮತ್ತು ನ್ಯಾಯಾಲಯ ಪ್ರಕರಣಗಳು ಮತ್ತು ಕಸಬಾ ಹೋಬಳಿ ಭೂ ಮಾಪಕರು |
| 11 | ಜಿ. ಯೋಗೇಂದ್ರಪ್ಪ | ಆಹಾರ ನಿರೀಕ್ಷಕರು | ಪಟ್ಟಣ ಪ್ರದೇಶಗಳ ಮೇಲ್ವಿಚಾರಣೆ |
| 12 | ಎಂ. ಬಾಲರಾಜ್ | ಆಹಾರ ನಿರೀಕ್ಷಕರು | ಗ್ರಾಮೀಣ ಪ್ರದೇಶಗಳ ಮೇಲ್ವಿಚಾರಣೆ |
| 13 | ಎಂ. ಲಿಂಗರಾಜ | ಉಪತಹಸೀಲ್ದಾರ್,<br>ನಾಡಕಛೇರಿ, ಅವಿನಹಳ್ಳಿ | ನಾಡಕಛೇರಿ, ಅವಿನಹಳ್ಳಿ ಇದರ ಮೇಲ್ವಿಚಾರಣೆ |
| 14 | ಎಸ್ ಎಂ ಮಠದ್ | ಪ್ರ ದ ರಾಜಸ್ವ ನಿರೀಕ್ಷಕರು | ಕಸಬಾ ಹೋಬಳಿ |
| 15 | ವೈ. ಚಂದ್ರನಾಯ್ಕ | ರಾಜಸ್ವ ನಿರೀಕ್ಷಕರು | ಆನಂದಪುರ ಹೋಬಳಿ |
| 16 | – (ಖಾಲಿ) | ರಾಜಸ್ವ ನಿರೀಕ್ಷಕರು | ತಾಳಗುಪ್ಪ ಹೋಬಳಿ |
| 17 | ಹೆಚ್. ಗೋಪಾಲ | ರಾಜಸ್ವ ನಿರೀಕ್ಷಕರು | ಅವಿನಹಳ್ಳಿ ಹೋಬಳಿ |
| 18 | ಸಿ.ಪಿ. ಪಕೀರಪ್ಪ | ರಾಜಸ್ವ ನಿರೀಕ್ಷಕರು | ಕರೂರು ಹೋಬಳಿ ಹಾಲಿ ಪ್ರಭಾರ:ಉಪತಹಸೀಲ್ದಾರ್ ನಾಕ ಕರೂರು ಸುಳ್ಳಳ್ಳಿ |

| ಕ್ರ. ಸಂ. | ನೌಕರರ ಹೆಸರು | ಹುದ್ದೆ | ನಿರ್ವಹಿಸುತ್ತಿರುವ ಶಾಖೆ |
|---|---|---|---|
| 19 | ಎನ್. ಷಡಾಕ್ಷರಿ | ರಾಜಸ್ವ ನಿರೀಕ್ಷಕರು | ಭಾರಂಗಿ ಹೋಬಳಿ |
| 20 | ಸುಶೀಲ ಎಸ್ ಹೆಗಡೆ | ದ್ವಿ ದ ಸ | 1) ಮುಜರಾಯಿ ಶಾಖೆ |
| 21 | ಕು: ಸಿದ್ದಮ್ಮ | ದ್ವಿ ದ ಸ | 1) ರವಾನೆ ಶಾಖೆ 2) ರಾ ಕು ಪ ಶಾಖೆ |
| 22 | ನಿರ್ಮಲ ಎಸ್ | ದ್ವಿ ದ ಸ | 1) ಭೂ ಸುಧಾರಣೆ 2) ಭೂ ಸ್ವಾಧೀನ 3) ಇನಾಂ 4) ಮಾಫಪಾಸ್ |
| 23 | ಸಿ.ಬಿ. ರೂಪ | ದ್ವಿದಸ | 1) ಅಂಗವಿಕಲ, ವಿಧವಾ, ವೃದ್ದಾಪ್ಯ ವೇತನ 2) ಸಂಧ್ಯಾಸುರಕ್ಷಾ ಯೋಜನೆ |
| 24 | ಸಿ. ನಾಗರತ್ನ | ದ್ವಿ ದ ಸ | 1) ಸಿಬ್ಬಂದಿ ಶಾಖೆ 1 ಮತ್ತು 2 |
| 25 | ಡಿ ವಿ ಗುರುರಾಯಾಚಾರ್ಯ | ದ್ವಿ ದ ಸ | 1) ದಾಖಲೆ ಕೊಠಡಿ 2. ಜನನಮರಣ ದಾಖಲೆ 3) ಮಾಜಿ ಪಟೇಲರ: ಶ್ಯಾನುಬೋಗರ ನಿವೃತ್ತಿ ವೇತನ |
| 26 | ಕೆ ಎಂ ತಮ್ಮಣ್ಣ | ದ್ವಿ ದ ಸ | 1) ನ್ಯಾಯಾಂಗ 2) ಅಂತ್ಯಸಂಸ್ಕಾರ 3) ಕಲ್ಲುಗಣಿ |
| 27 | ಶೋಭಾರಾಣಿ | ದ್ವಿ ದ ಸ | 1) ಒತ್ತುವರಿ 2) ಆಶ್ರಯ 3) ಮನೆದಳ |
| 28 | ಟಿ ಡಿ ಬಂಗಾರಪ್ಪ | ದ್ವಿ ದ ಸ | 1) ಬಗರ್ ಹುಕುಂ 2) ಚುನಾವಣಾ ಶಾಖೆಯ ವಿ.ನಿ |
| 29 | ಜಿ. ಕೃಷ್ಣಮೂರ್ತಿ | ದ್ವಿ ದ ಸ | 1) ಆಹಾರ ಶಾಖೆಯ ವಿಷಯ ನಿರ್ವಾಹಕರು |
| 30 | ಕಲ್ಲಪ್ಪ ಮೆಣಸಿನಾಳ್ | ದ್ವಿ ದ ಸ | 1) ಜಾತಿ ಮತ್ತು ಆದಾಯ 2) ಭೂ ಪರಿವರ್ತನೆ 3) ಅಕ್ರಮಸಕ್ರಮ ಶಾಖೆ |
| 31 | ರಘುನಾಥ ಜೋಯಿಸ್ (ಮುಜರಾಯಿ ಇಲಾಖೆ) | ದ್ವಿ ದ ಸ | 1) ಪ್ರಕೃತಿ ವಿಕೋಪ 2) ಮುಖ್ಯಮಂತ್ರಿಗಳ ಪರಿಹಾರ ನಿಧಿ ಯೋಜನೆ |
| 32 | ಮಂಜುನಾಥ | ದ್ವಿದಸ | 1) ಸುಳ್ಳಳ್ಳಿ ನಾಡಕಛೇರಿ ವಿಷಯ ನಿರ್ವಾಹಕರು |
| 33 | ಎಂ. ಶ್ರೀಕಂಠೇಶ್ವರ | ದ್ವಿದಭೂಮಾಪಕರು | 1) ತಾಲ್ಲೂಕು ಸರ್ವೇಯರ್ |
| 34 | ಕಿರಣ್‌ಕುಮಾರ್ | ದ್ವಿದಭೂಮಾಪಕರು | 1) ಆನಂದಪುರ ಹೋಬಳಿ ಸರ್ವೇಯರ್ |
| 35 | ಮಾಧವ | ದ್ವಿದಭೂಮಾಪಕರು | 2) ಕರೂರು ಹೋಬಳಿ ಸರ್ವೇಯರ್ |
| 36 | ಎಸ್. ರಾಘವೇಂದ್ರ | ದ್ವಿದಭೂಮಾಪಕರು | 3) ತಾಳಗುಪ್ಪ ಮತ್ತು ಬಾರಂಗಿ ಹೋಬಳಿ ಸರ್ವೇಯರ್ |
| 37 | ಅನಿಲ್ ಆರ್ ಮಧುಕವಿ | ದ್ವಿದಭೂಮಾಪಕರು | 4) ಸರ್ವೆ ಶಾಖೆ ಕಾರ್ಯ ನಿರ್ವಹಣೆ |
| 38 | ರಾಜುನಾಯ್ಕ | ದ್ವಿದಭೂಮಾಪಕರು | 5) ಸರ್ವೆ ಶಾಖೆ ದಾಖಲೆ ಕೊಠಡಿ ನಿರ್ವಹಣೆ |
| 39 | ಹೆಚ್ ಜಿ ಲಕ್ಷ್ಮೀನಾರಾಯಣ | ಬೆರಳಚ್ಚುಗಾರ | ತಾಲ್ಲೂಕು ಕಛೇರಿ ಬೆರಳಚ್ಚು ಶಾಖೆ ನಿರ್ವಹಣೆ |
| 40 | ಕೆ.ವಿ. ಉಮಾವತಮ್ಮ | ಬೆರಳಚ್ಚುಗಾರ | ಅವಿನಹಳ್ಳಿ ನಾಡಕಛೇರಿ ವಿಷಯ ನಿರ್ವಾಹಕರು ಹಾಗೂ ಬೆರಳಚ್ಚು ಕಾರ್ಯನಿರ್ವಹಣೆ. |

**ತಾಲ್ಲೂಕು ಕಛೇರಿ, ಸಾಗರ – ಗ್ರಾಮಲೆಕ್ಕಿಗರು ಕಾರ್ಯನಿರ್ವಹಿಸುತ್ತಿರುವ ವಿವರ**

| ಕ್ರ. ಸಂ. | ಹೆಸರು | ಪದನಾಮ | ಕಾರ್ಯನಿರ್ವಹಿಸುತ್ತಿರುವ ವೃತ್ತ |
|---|---|---|---|
| 1 | ಎನ್ ಡಿ ವೆಂಕಟಗಿರಿ | ಗ್ರಾಮಲೆಕ್ಕಿಗರು | ಮಾಸೂರು ವೃತ್ತ |
| 2 | ವಿ. ಮನೋಹರ | ಗ್ರಾಮಲೆಕ್ಕಿಗರು | ನಾಡಕಲಸಿ ವೃತ್ತ |
| 3 | ಬಿ ವಿ ಶ್ರೀಧರಸ್ವಾಮಿ | ಗ್ರಾಮಲೆಕ್ಕಿಗರು | ಕೆಳದಿ ವೃತ್ತ – ಪ್ರಭಾರ ಮಾಲ್ವೆ ವೃತ್ತ |
| 4 | ಎಲ್. ಮಂಜುನಾಥ | ಗ್ರಾಮಲೆಕ್ಕಿಗರು | ಕಲ್ಮನೆ ವೃತ್ತ |

| ಕ್ರ. ಸಂ. | ಹೆಸರು | ಪದನಾಮ | ಕಾರ್ಯನಿರ್ವಹಿಸುತ್ತಿರುವ ವೃತ್ತ |
|---|---|---|---|
| 5 | ಎಂ ವಿ ಗಜೇಂದ್ರ | ಗ್ರಾಮಲೆಕ್ಕಿಗರು | ಪಡವಗೋಡು ವೃತ್ತ |
| 6 | ಜಾನ್ ಲೋಪೀಸ್ | ಗ್ರಾಮಲೆಕ್ಕಿಗರು | ಖಂಡಿಕಾ ವೃತ್ತ |
| 7 | ಡಿ. ನಟರಾಜ | ಗ್ರಾಮಲೆಕ್ಕಿಗರು | ಭೀಮನಕೋಣೆ–ಪ್ರಭಾರ ಆತಿವಾಡಿ |
| 8 | ಡಿ. ಧರ್ಮಪ್ಪ | ಗ್ರಾಮಲೆಕ್ಕಿಗರು | ಅವಿನಹಳ್ಳಿ ವೃತ್ತ |
| 9 | ಹೆಚ್ ಎಂ ಬಸವರಾಜಪ್ಪ | ಗ್ರಾಮಲೆಕ್ಕಿಗರು | ಕುದರೂರು ವೃತ್ತ |
| 10 | ಅಬ್ದುಲ್ ಸತ್ತಾರ್ | ಗ್ರಾಮಲೆಕ್ಕಿಗರು | ಬಿದರೂರು ವೃತ್ತ |
| 11 | ಎ. ವಿನಯಕುಮಾರ್ | ಗ್ರಾಮಲೆಕ್ಕಿಗರು | ಕಲ್ಮನೆ ವೃತ್ತ ಕಿಯಾಸ್ಕಗೆ ನಿಯೋಜನೆ |
| 12 | ಬಿ. ಚನ್ನಕೇಶವ | ಗ್ರಾಮಲೆಕ್ಕಿಗರು | ಬೇಸೂರು ವೃತ್ತ ಕಿಯಾಸ್ಕಗೆ ನಿಯೋಜನೆ |
| 13 | ಎಂ ಎನ್ ವಿನಾಯಕ | ಗ್ರಾಮಲೆಕ್ಕಿಗರು | ಮಾಲ್ವೆ ವೃತ್ತ ಕಿಯಾಸ್ಕಗೆ ನಿಯೋಜನೆ |
| 14 | ಎನ್ ಜೆ ನಾಗರಾಜ | ಗ್ರಾಮಲೆಕ್ಕಿಗರು | ಗೌತಮಪುರ ವೃತ್ತ ಕಿಯಾಸ್ಕಗೆ ನಿಯೋಜನೆ |
| 15 | ಎಸ್ ಎಸ್ ಕವಿರಾಜ | ಗ್ರಾಮಲೆಕ್ಕಿಗರು | ಗೌತಮಪುರ ವೃತ್ತ |
| 16 | ಎಸ್ ಎಂ ಮಂಜುನಾಥ | ಗ್ರಾಮಲೆಕ್ಕಿಗರು | ಮರತ್ತೂರು ವೃತ್ತ ಭಾನುಕುಳಿ ವೃತ್ತ |
| 17 | ಹೆಚ್ ಜಿ ಮೋಹನ್ | ಗ್ರಾಮಲೆಕ್ಕಿಗರು | ಉಳ್ಳೂರು ವೃತ್ತ |
| 18 | ಅರುಣಕುಮಾರ್ ಎಸ್ ಕೆ | ಗ್ರಾಮಲೆಕ್ಕಿಗರು | ಆತವಾಡಿ |
| 19 | ವಿ. ಕೃಷ್ಣಮೂರ್ತಿ | ಗ್ರಾಮಲೆಕ್ಕಿಗರು | ಅಡೂರು ವೃತ್ತ |
| 20 | ಜಿ. ನರಸಿಂಹಮೂರ್ತಿ | ಗ್ರಾಮಲೆಕ್ಕಿಗರು | ತುಮರಿ ವೃತ್ತ |
| 21 | ಆರ್ ವೀರೇಂದ್ರ | ಗ್ರಾಮಲೆಕ್ಕಿಗರು | ನೀಚಡಿ ವೃತ್ತ |
| 22 | ಅಶೋಕ ಎಸ್ ಕೆ | ಗ್ರಾಮಲೆಕ್ಕಿಗರು | ಅರೆಹದ ಮತ್ತು ಕಾನ್ಲೆ ವೃತ್ತ |
| 23 | ವಿ ಎನ್ ಶ್ರೀಧರ | ಗ್ರಾಮಲೆಕ್ಕಿಗರು | ಭೀಮನೇರಿ |
| 24 | ರವಿಚಂದ್ರ ಸಿ | ಗ್ರಾಮಲೆಕ್ಕಿಗರು | ಬೇಸೂರು |
| 25 | ಎಸ್ ಪಿ ಚಂದ್ರಮೌಳೇಶ್ವರ | ಗ್ರಾಮಲೆಕ್ಕಿಗರು | ಗಿಳಲಗುಂಡಿ |
| 26 | ರಾಘವೇಂದ್ರ ಎಂ | ಗ್ರಾಮಲೆಕ್ಕಿಗರು | ತ್ಯಾಗರ್ತಿ |
| 27 | ರಾಘವೇಂದ್ರ ಹೆಚ್ ಆರ್ | ಗ್ರಾಮಲೆಕ್ಕಿಗರು | ಮರಡವಳ್ಳಿ |
| 28 | ನಾಗರಾಜ್ ಸುಭಾಷ್ ಶ್ಯಾನುಭೋಗ್ | ಗ್ರಾಮಲೆಕ್ಕಿಗರು | ಶಿರವಂತೆ |
| 29 | ಎಲ್. ದೇವರಾಜ | ಗ್ರಾಮಲೆಕ್ಕಿಗರು | ಬರೂರು |
| 30 | ಎನ್. ಮಂಜುಳ | ಗ್ರಾಮಲೆಕ್ಕಿಗರು | ಹಿರೇಮನೆ |
| 31 | ಇಮಾಂ ಖಾಸಿಂ | ಗ್ರಾಮಲೆಕ್ಕಿಗರು | ಹೆಗ್ಗೋಡು |
| 32 | ಮೋಹನ್‌ಕುಮಾರ್ ಜಿ | ಗ್ರಾಮಲೆಕ್ಕಿಗರು | ಚಿನ್ನಗೊಂಡ |
| 33 | ಶಂಕರ್ ಜಿ ಎನ್ | ಗ್ರಾಮಲೆಕ್ಕಿಗರು | ಆನಂದಪುರ |
| 34 | ಆರೋಕ್ಯ ಸುನಿಲ್ ಕುಮಾರ್ | ಗ್ರಾಮಲೆಕ್ಕಿಗರು | ನಂದಿತಳೆ |
| 35 | ಯಶೋದಮ್ಮ | ಗ್ರಾಮಲೆಕ್ಕಿಗರು | ತಾಳಗುಪ್ಪ |
| 36 | ರಘು ಕೆ ಎಸ್ | ಗ್ರಾಮಲೆಕ್ಕಿಗರು | ಸೈದೂರು |

**ಸಭೆ ಮತ್ತು ರಾಷ್ಟ್ರೀಯ ಹಬ್ಬಗಳು:**

ತಾಲ್ಲೂಕಿನಲ್ಲಿ ನಡೆಯುವ ಎಲ್ಲಾ ಉತ್ಸವ ರಾಷ್ಟ್ರೀಯ ಹಬ್ಬಗಳು ಮತ್ತು ತಾಲ್ಲೂಕು ಅಭಿವೃದ್ಧಿ ಕಾರ್ಯಕ್ರಮ ಬಗ್ಗೆ ಜರುಗುವ ಸಭೆ ಸಮಾರಂಭಗಳನ್ನು ನಿರ್ವಹಣೆ ಮಾಡುವುದು.

**ಅಭಿಲೇಖಾಲಯ:**

ಕಛೇರಿಯ ಪ್ರತಿಯೊಂದು ಶಾಖೆಯಿಂದ ನಿರ್ವಹಣೆಗಾಗಿ ಕಛೇರಿ ಸಹಕಾರದಿಂದ ಬೇರೆ ಬೇರೆ ಬಾಕಿಯ ವಿಲೆಗಳ ಬೇರೆ ಬೇರೆ ವರ್ಗಗಳ ಕಾಗದ ಪತ್ರಗಳ ವ್ಯವಹಾರಗಳನ್ನು ಎಷ್ಟು ಕಾಲ ಕಾಯ್ದಿರಿಸಬೇಕೆಂಬುದನ್ನು ತಿಳಿದು ಈ ಕೆಳಕಾಣಿಸಿದ ಪ್ರಕಾರ ವಿಭಜನೆ ಮಾಡಲಾಗುವುದು ಶ್ರೇಣಿವಾರು ಹೊಂದಿಸಿ ಇಡಲಾಗುವುದು.

‘ಎ’ ಡಿಸ್ – ಅನಿರ್ದಿಷ್ಟ (ಖಾಯಂ)
‘ಬಿ’ ಡಿಸ್ – 30 ವರ್ಷಗಳು
‘ಸಿ’ ಡಿಸ್ – 10 ವರ್ಷಗಳು
‘ಡಿ’ ಡಿಸ್ – 5 ವರ್ಷಗಳು
‘ಇ’ ಡಿಸ್ – 1 ವರ್ಷಗಳು

ಮೇಲೆ ಕಾಣಿಸಿದ ವಿಲೇವಾರಿಗಳ ಅವಧಿ ಮುಗಿದ ನಂತರ ಕಛೇರಿಯ ಮುಖ್ಯಸ್ಥರ ಆದೇಶವನ್ನು ಪಡೆದು ‘ಎ’ ಮತ್ತು ‘ಬಿ’ ಡಿಸ್‌ಗಳಲ್ಲಿನ ಕಡತಗಳನ್ನು ಹೊರತುಪಡಿಸಿ ನಾಶಗೊಳಿಸಲಾಗುವುದು.

ಕಾರ್ಯಾಲಯದ ಪೀಠೋಪಕರಣ ಕಾರ್ಯನಿರ್ವಹಣೆ ಯಂತ್ರ ಸಾಮಗ್ರಿಗಳ ಖರೀದಿ ಮತ್ತು ದುರಸ್ತಿ ಕಾರ್ಯಾಲಯದ ವ್ಯವಹಾರಕ್ಕೆ ಅವಶ್ಯವಿರುವ ಲೇಖನ ಸಾಮಗ್ರಿ ಖರೀದಿ ಮತ್ತು ವಿತರಣೆ ಕಛೇರಿಯ ಸುವ್ಯವಸ್ಥೆ ವಿದ್ಯುದ್ದೀಕರಣ ನಿರ್ವಹಣೆ ವಿವಿಧ ಕಾಯ್ದೆ ಅಡಿ ಇರುವ ಎಲ್ಲಾ ಪುಸ್ತಕಗಳನ್ನು ಸುಸ್ಥಿತಿಯಲ್ಲಿ ಇರುವುದು ಮತ್ತು ಸಂಬಂಧಪಟ್ಟ ಕಡತವನ್ನು ನೀಡುವುದು ಅಲ್ಲದೇ ಸಾರ್ವಜನಿಕರು ಕೋರುವ ದಾಖಲೆಗಳನ್ನು ನಿಯಮಾನುಸಾರ ನೀಡಲಾಗುತ್ತದೆ.

**ಸಾಮಾಜಿಕ ಭದ್ರತಾ ಯೋಜನೆ:**

ಸಾಮಾಜಿಕ ಭದ್ರತಾ ಯೋಜನೆ ಅಡಿಯಲ್ಲಿ ಬರುವ ಫಲಾನುಭವಿಗಳಿಗೆ ಅನುದಾನ ಜಿಲ್ಲಾಧಿಕಾರಿಗಳಿಂದ ಬಿಡುಗಡೆಯಾದ ನಂತರ ಪಾವತಿಸುವುದು, ವೃದ್ದಾಪ್ಯ, ಅಂಗವಿಕಲ ವಿಧವಾ ವೇತನದಾರರಿಗೆ ಮಂಜೂರು ಪತ್ರ ನೀಡಲಾಗುವುದು. ಜಾತಿ ಆದಾಯ ಮತ್ತು ವಾಸ್ತವ್ಯ ಪ್ರಮಾಣ ಪತ್ರಗಳನ್ನು ವಿತರಣೆ ಮಾಡುವುದು ಮತ್ತು ನಿರ್ವಹಣೆ.

**ಸ್ವೀಕೃತಿ**

ಕಛೇರಿಗೆ ಸ್ವೀಕೃತವಾಗುವ ಸರ್ಕಾರದ ಅಧೀನ ಕಾರ್ಯಾಲಯದ ಮತ್ತು ಜಿಲ್ಲಾಧಿಕಾರಿಗಳ ಮತ್ತು ಸಹಾಯಕ ಕಮೀಷನರ್ ಸಾರ್ವಜನಿಕರ ಮತ್ತು ಸ್ಥಳೀಯ ಸಂಸ್ಥೆಯ ಸದಸ್ಯರುಗಳಿಂದ ಸ್ವೀಕೃತವಾಗುವ ಅರ್ಜಿಗಳಿಗೆ ಮತ್ತು ಪತ್ರಗಳಿಗೆ ತನಿಖೆ ನಡೆಸಿ ಕ್ಲಿಪ್ತ ಸಮಯದಲ್ಲಿ ಮಾಹಿತಿಯನ್ನು ನೀಡಲಾಗುವುದು.

**ಡಾ: ನಾಗೇಂದ್ರ ಎಫ್.ಹೊನ್ನಳ್ಳಿ**
ತಹಸೀಲ್ದಾರ್
ಸಾಗರ ತಾಲ್ಲೂಕು, ಸಾಗರ.

ಪಿ.ಆರ್. 945

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ**

**ವಿಷಯ:** ಸಮಾಪನೆಗೊಂಡಿರುವ ಗೊಪ್ಪೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ಗೊಪ್ಪೇನಹಳ್ಳಿ, ಚನ್ನಗಿರಿ–ತಾ, ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(3) ರನ್ವಯ ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಇವರ ಆದೇಶ ಸಂಖ್ಯೆ:ಡಿಆರ್‌ಎಸ್/ಸಮಾಪನೆ/ಸಿಆರ್–1096/1994–95 ದಿನಾಂಕ: 20.07.1994.
2. ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರ ಪತ್ರ ಸಂ:ಸಅ:ಚನ್ನಗಿರಿ/49/ಪುನಃಶ್ಚೇತನ/08–09 ದಿ:09.09.2008.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಕಳೆದ 10–12 ವರ್ಷಗಳಿಂದ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಆದೇಶದ ರೀತ್ಯಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಇವರು ಸಮಾಪನೆಗೊಳಿಸಿ, ಮೇಲ್ವಿಚಾರಕರು, ಡಿ.ಸಿ.ಸಿ. ಬ್ಯಾಂಕ್ ನಿ, ಶಿವಮೊಗ್ಗ, ಚನ್ನಗಿರಿ ಶಾಖೆ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಆದರೆ ಸಮಾಪನಾಧಿಕಾರಿಗಳು ಸಂಘದ ಪ್ರಭಾರ ವಹಿಸಿಕೊಂಡಿರುವುದಿಲ್ಲ. ಅದು ಅಲ್ಲದೆ, ಉಲ್ಲೇಖ 2ರ ಪತ್ರದಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ, ಇವರು ದಿ:05.09.2008 ರಂದು ಸಂಘದ ವ್ಯಾಪ್ತಿಯ ಹಳ್ಳಿಗಳ ಗ್ರಾಮಸ್ಥರು ಸಭೆ ಸೇರಿ ಸಭೆಯಲ್ಲಿ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘದ ಕಾರ್ಯಚಟುವಟಿಕೆಗಳನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಸರ್ವಾನುಮತದಿಂದ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನ ಕೈಗೊಂಡಿರುತ್ತಾರೆಂದು ತಿಳಿಸುತ್ತಾ. ಸಂಘದ ಸಮಾಪನಾ ಆದೇಶವನ್ನು ರದ್ದುಪಡಿಸಿ, ಸದರಿ ಸಂಘವನ್ನು ಸಂಘದ ಸದಸ್ಯರ ಹಿತದೃಷ್ಟಿಯಿಂದ ಪುನಃಶ್ಚೇತನಕ್ಕೆ ಅವಕಾಶ ಮಾಡಿಕೊಡಲು ಕೋರಿರುತ್ತಾರೆ. ಹಾಗೂ ದಿ:05.09.2008 ರ ಸಭೆಯಲ್ಲಿ ಕೈಗೊಂಡಿರುವ ನಿರ್ಣಯದಂತೆ ಸಂಘವು ಕಾರ್ಯನಿರ್ವಹಿಸುತ್ತಿರುವ ಸ್ಥಳದ ವಿವರ ಸಂಘದ ನಾಮಫಲಕ ಇಲಾಖೆಗೆ ಸಲ್ಲಿಸಬೇಕಾದ ಮಾಹಿತಿಗಳನ್ನು ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರ ಮೂಲಕ

ಸಲ್ಲಿಸುವಂತೆ ಸೂಚಿಸುತ್ತಾ ಮತ್ತು ಸಂಘದ ಸದಸ್ಯರು ಹಾಕಿಕೊಂಡಿರುವ ಕ್ರಿಯಾ ಯೋಜನೆ ಪ್ರಕಾರ ಪ್ರತಿ ಆರು ತಿಂಗಳಿಗೊಮ್ಮೆ ಗುರಿ ಸಾಧನೆಯ ಪ್ರಗತಿ ತಃಖ್ತೆಯನ್ನು ಈ ಕಚೇರಿಗೂ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಚೇರಿಗೂ ಸಲ್ಲಿಸುವಂತೆ ಸೂಚಿಸಿದೆ. ಹಾಗೂ ಸಂಘವನ್ನು ಪುನಃಶ್ಚೇತನಗೊಳಿಸಿದ ನಂತರ ಸಮಾಪನಾಧಿಕಾರಿಯು ಪ್ರಾರಂಭಿಕ ಷೇರು ಹಣ ರೂ.75,000–00 ದಿಂದ ರೂ.1,00,000–00 ಗಳವರೆಗೆ ಸಂಗ್ರಹಿಸಬೇಕೆಂಬ ಷರತ್ತನ್ನು ವಿಧಿಸಿದೆ. ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘವನ್ನು ಪುನಃಶ್ಚೇತನಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ನಂ:ಡಿಆರ್/ಡಿವಿಜಿ/ಸಮಾಪನೆ/ಸಿಆರ್–04/2008–09, ದಿನಾಂಕ: 24ನೇ ಸೆಪ್ಟೆಂಬರ್ 2008**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(3) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್ಎಮ್:2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ. ಕುಬೇರಪ್ಪ, ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಆದ ನಾನು ಸಮಾಪನೆಗೊಂಡಿರುವ ಗೊಪ್ಪೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ, ಗೊಪ್ಪೇನಹಳ್ಳಿ, ಚನ್ನಗಿರಿ–ತಾ. ಇದರ ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

**ಷರತ್ತುಗಳು**

1) ಪುನಃಶ್ಚೇತನಗೊಂಡ 6 ತಿಂಗಳ ಒಳಗಾಗಿ ಲೆಕ್ಕಪರಿಶೋಧನೆ ಮಾಡಿಸಿ ಸದರಿ ವರದಿಯನ್ನು ಈ ಕಚೇರಿಗೆ ಸಲ್ಲಿಸುವುದು.
2) ಕ್ರಿಯಾಯೋಜನಾ ರೀತ್ಯಾ ಕಾರ್ಯಕ್ರಮ ಹಮ್ಮಿಕೊಂಡು ಪ್ರಗತಿ ಸಾಧಿಸುವುದು.
3) ಡಿ.ಡಿ.ಸಿ.ಸಿ. ಬ್ಯಾಂಕ್ ನೊಂದಿಗೆ ವ್ಯವಹಾರ ಮಾಡತಕ್ಕದ್ದು.

ಒಂದು ವೇಳೆ ಷರತ್ತಿಗನುಗುಣವಾಗಿ 6 ತಿಂಗಳ ನಂತರ ಯಾವುದೇ ಪ್ರಗತಿ ಸಾಧಿಸದಿದ್ದಲ್ಲಿ ಸಂಘವನ್ನು ನೇರವಾಗಿ ಸಮಾಪನೆಗೊಳಿಸಲಾಗುವುದು.

ಸಂಘದ ಪ್ರಥಮ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಸಮಾಪನಾಧಿಕಾರಿಗೆ ಸೂಚಿಸಿದೆ. ಹಾಗೂ ನೂತನ ಆಡಳಿತ ಮಂಡಳಿಯನ್ನು ರಚಿಸಲು ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ, ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ. ಚುನಾವಣಾಧಿಕಾರಿಗಳು, ಚುನಾವಣಾ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 24.09.2008 ರಂದು ಹೊರಡಿಸಿದೆ.

ಪಿ.ಆರ್. 1141 ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಆದೇಶ ಸಂ:ಇಎಕ್ಸ್ಇ:ಕೊ.ಜಿ.ಡಿಟಿಸಿಆರ್ಎಂ:93–2007–08, ದಿನಾಂಕ: 18ನೇ ನವೆಂಬರ್ 2008**

| **ಫಿರ್ಯಾದುದಾರರು** | **ವಿರುದ್ಧ** | **ಆಪಾದಿತರು** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಠಾಣೆ, ಮಡಿಕೇರಿ. | | ಪತ್ತೆಯಾಗಿರುವುದಿಲ್ಲ. |

ದಿನಾಂಕ:23.7.2007 ರಂದು ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಠಾಣೆ, ಮಡಿಕೇರಿ ರವರಿಗೆ ಮಡಿಕೇರಿ ತಾಲ್ಲೂಕಿನ ಸಂಪಾಜೆ ಗ್ರಾಮದ ಚಡಾವು ಎಂಬಲ್ಲಿ ಕಾರ್ ಸಂ:KA-19-P-2457ರಲ್ಲಿ ಅಕ್ರಮವಾಗಿ ಸಾರಾಯಿ ಪ್ಯಾಕೇಟುಗಳನ್ನು ಸಾಗಾಟ ಮಾಡುತ್ತಿರುವ ಬಗ್ಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಸದರಿಯವರು ತಮ್ಮ ಸಿಬ್ಬಂದಿಯೊಂದಿಗೆ ಮಡಿಕೇರಿಯಿಂದ ಕೊಯನಾಡು ಬಳಿ ತಮ್ಮ ಎದುರಿಗೆ ಬರುತ್ತಿದ್ದ ಒಂದು ಕೆಂಪು ಬಣ್ಣದ ಕಾರಿನ ಚಾಲಕ ಪೊಲೀಸ್ ಅಧಿಕಾರಿಗಳನ್ನು ಕಂಡು ತನ್ನ ಕಾರನ್ನು ತಿರುಗಿಸಿಕೊಂಡು ವೇಗವಾಗಿ ಚಡಾವು ರಸ್ತೆಯಲ್ಲಿ ಹೋದನು. ಸದರಿ ಕಾರನ್ನು ಅಧಿಕಾರಿಗಳು ಹಿಂಬಾಲಿಸಿದಾಗ ಕಾರಿನ ಚಾಲಕನು ಕಾರನ್ನು ಚಡಾವು ಗ್ರಾಮದಲ್ಲಿರುವ ರುಕ್ಮಿಣಿಯವರ ತೋಟದ ಮನೆಯ ಅಂಗಳದಲ್ಲಿ ನಿಲ್ಲಿಸಿ ಕಾರಿನಲ್ಲಿದವರೊಂದಿಗೆ ಪರಾರಿಯಾಗಿರುತ್ತಾರೆ.

ನಂತರ ಪೊಲೀಸ್ ಅಧಿಕಾರಿಗಳು ಕಾರನ್ನು ಟಾರ್ಚ್ ಬೆಳಕಿನಿಂದ ಪರಿಶೀಲಿಸಿದಾಗ ಕಾರಿನ ಸಂ: KA-19-P-2457 ಆಗಿದ್ದು, ಕಾರಿನ ಒಳಗೆ ಸುಮಾರು 20 ಪ್ಲಾಸ್ಟಿಕ್ ಚೀಲದಲ್ಲಿ ಸಾರಾಯಿ ಪ್ಯಾಕೇಟುಗಳಿದ್ದು, ಎಣಿಸಿ ನೋಡಲಾಗಿ ಪ್ರತಿ ಚೀಲದಲ್ಲಿ 300 x 100 ml ಸಾರಾಯಿ ಪ್ಯಾಕೇಟಿನಂತೆ 6,000 ಸಾರಾಯಿ ಪ್ಯಾಕೇಟುಗಳಿದ್ದು ಸಾರಾಯಿ ಪ್ಯಾಕೇಟಿನ ಮೇಲೆ 100 ml 35 UP, J.P. Distilleries Pvt. Ltd., ಮದ್ಯಪಾನ ಆರೋಗ್ಯಕ್ಕೆ ಹಾನಿಕರ ಎಂದು ಬರೆದಿದ್ದು, ಟಾರ್ಚ್ ಬೆಳಕಿನ ಸಹಾಯದಿಂದ ಪಂಚರ ಸಮಕ್ಷಮ ಮಹಜರು ಮೂಲಕ ಸಾರಾಯಿ ಪ್ಯಾಕೇಟು ಮತ್ತು ಅಪಲೋ ಅಸ್ಟ್ರಾ ಕಾರನ್ನು

ಅಮಾನತುಪಡಿಸಿಕೊಂಡಿರುತ್ತಾರೆ. ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ವಿಧಿ 32, 34, 11, 14 ರಂತೆ ಅಪರಾಧವಾದರಿಂದ ಆರಕ್ಷಕ ಉಪ ನಿರೀಕ್ಷಕರ ಪ್ರ.ವ.ಸಂ:123/07, ದಿ:24.07.07ರಂತೆ ಪ್ರಕರಣವನ್ನು ದಾಖಲಿಸಿಕೊಂಡಿರುತ್ತಾರೆ. ನ್ಯಾಯಾಲಯದ ಆದೇಶದಂತೆ ವಾಹನವನ್ನು ಮಾತ್ರ ಹಸ್ತಾಂತರಿಸಲು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ರವರಿಂದ ಅನುಮತಿ ಪಡೆದು, ಅಬಕಾರಿ ನಿರೀಕ್ಷಕರು, ಮಡಿಕೇರಿ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಸದರಿ ಪ್ರಕರಣದ ಬಗ್ಗೆ ಆರಕ್ಷಕ ಉಪ ನಿರೀಕ್ಷಕರು, ವಾಹನದ ಮಾಲೀಕತ್ವವನ್ನು ತಿಳಿಯಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಮಂಗಳೂರು ರವರಿಂದ ವಾಹನದ ಮಾಲೀಕತ್ವದ ವಿವರವನ್ನೊಳಗೊಂಡ 'ಬಿ' ಎಕ್ಸ್‌ಟ್ರಾಕ್ಟ್‌ನ್ನು ಪಡೆದು ವಾಹನ ಮತ್ತು ಮೊಕದ್ದಮೆಯ ಜೆರಾಕ್ಸ್ ಪ್ರತಿಯನ್ನು ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು, ಮಡಿಕೇರಿ ವಲಯ ಇವರಿಗೆ ಕಳುಹಿಸಿಕೊಟ್ಟಿರುತ್ತಾರೆ.

ಸದರಿ 'ಬಿ' ಎಕ್ಸ್‌ಟ್ರಾಕ್ಟ್‌ನಲ್ಲಿ ವಾಹನ ಸಂKA-19-P-2457ಗೆ ಸಂಬಂಧಿಸಿ ಶ್ರೀ ಕಿರಣ್ ಜೋಸೆಫ್ ಮೆನೆಜಸ್, ಬಿನ್ ವಿಕ್ಟರ್ ಮೆನೆಜಸ್, ಪ್ರೀತಿ ವಿಹಾರ್, ಲೋವರ್ ಬೆಂದೂರು, ಮೂರನೇ ಅಡ್ಡರಸ್ತೆ, ಮಂಗಳೂರು ಇವರು ಮಾಲೀಕರೆಂದು ತಿಳಿಸಿದ್ದು, ಅಂತೆಯೇ ಸದರಿಯವರಿಗೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43B ರನ್ವಯ ದಿ:21.7.2008ರಂದು ಕಾರಣಕೇಳಿ ನೋಟೀಸ್ ನೀಡಲಾಗಿತ್ತು. ದಿ:30.07.2008 ರಂದು ಶ್ರೀ ಕಿರಣ್ ಜೋಸೆಫ್ ಮೆನೆಜಸ್ ರವರು ಅವರ ಪರ ವಕೀಲರ ಮೂಲಕ ವರದಿಯನ್ನು ಸಲ್ಲಿಸಿ ವಾಹನ ಸಂ:KA-19-P-2457 ವಾಹನವು ಮಹೇಂದ್ರ ಸ್ಕಾರ್ಪಿಯೋ ಆಗಿದ್ದು, ಸದರಿ ವಾಹನವನ್ನು ತನ್ನ ಸ್ವಂತ ಕೆಲಸಕ್ಕಾಗಿ ಉಪಯೋಗಿಸುತ್ತಿದ್ದು, ತನ್ನ ವಶದಲ್ಲಿರುವುದಾಗಿ ಯಾವುದೇ ದುಷ್ಕೃತ್ಯಕ್ಕೆ ಬಳಸುತ್ತಿಲ್ಲವಾಗಿ ತಿಳಿಸಿದ್ದು, ಅಲ್ಲದೆ ತನ್ನ ವಾಹನವು ಪ್ರಕರಣ ದಾಖಲಾದ ದಿನಾಂಕದಂದು ಮಡಿಕೇರಿಯಲ್ಲಿ ಚಾಲನೆಯಾಗುವ ಸಾಧ್ಯತೆಯಿಲ್ಲವೆಂದು, ಅಕ್ರಮ ಮಧ್ಯ ಸಾಗಾಣಿಕೆ ಎಸಗುವಂತಹ ವ್ಯಕ್ತಿಗಳು ಸುಳ್ಳು ನಂಬರ್ ಪ್ಲೇಟ್ ಬಳಸಿ ಓಡಿಸುತ್ತಿರಬಹುದೆಂದು ತನ್ನ ವಾಹನ ಯಾವುದೇ ಅಕ್ರಮ ಕೃತ್ಯದಲ್ಲಿ ಬಾಗಿಯಾಗದ ಕಾರಣ ಮಹೇಂದ್ರ ಸ್ಕಾರ್ಪಿಯೋ ಕಾರ್ ವಾಹನದ ಮೇಲಿರುವ ಈ ಪ್ರಕರಣವನ್ನು ಇಲ್ಲಿಗೆ ಕೈಬಿಡಬೇಕಾಗಿ ಕೋರಿರುತ್ತಾರೆ.

ಅಲ್ಲದೆ ವಾಹನಕ್ಕೆ ಸಂಬಂಧಪಟ್ಟ ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ನಿರೀಕ್ಷಕರು, ಮಡಿಕೇರಿ ವಲಯ ಇವರು ತನಿಖೆಯನ್ನು ಪೂರ್ಣಗೊಳಿಸಿ ಅಬಕಾರಿ ಉಪ ಅಧೀಕ್ಷಕರು, ಉಪ ವಿಭಾಗ, ಮಡಿಕೇರಿ ಇವರ ಮುಖಾಂತರ ಪ್ರಸ್ತಾವನೆಯನ್ನು ಸಲ್ಲಿಸಿ ಸಂ:KA-19-P-2457ರ ವಾಹನವನ್ನು ಆರಕ್ಷಕರು ಉಪ ನಿರೀಕ್ಷಕರು ವಶಪಡಿಸಿಕೊಂಡು ಒಂದು ವರ್ಷ ಕಳೆದರು ಇಲ್ಲಿಯವರೆಗೆ ವಾಹನಕ್ಕೆ ಸಂಬಂಧಪಟ್ಟವರು ಈ ಕಛೇರಿಗೆ ಹಾಜರಾಗಿರುವುದಿಲ್ಲ ಅಲ್ಲದೆ ಲಿಖಿತ ರೂಪದಲ್ಲಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಹಾಗೂ 'ಬಿ' ಎಕ್ಸ್‌ಟ್ರಾಕ್ಟ್‌ನಲ್ಲಿ ನಮೂದಿಸಿರುವಂತೆ ಹಾಗೂ ವಾಹನದಲ್ಲಿ ಹಾಲಿ ಇರುವ ನಂಬರ್ ಪ್ಲೇಟ್‌ನಲ್ಲಿ OPELA ASTRA ಕಾರ್ ಸಂ:KA-19-P-2457 ಎಂದು ನಮೂದಿಸಿದ್ದು, 'ಬಿ' ಎಕ್ಸ್‌ಟ್ರಾಕ್ಟ್‌ನಲ್ಲಿ ಮಹೇಂದ್ರ & ಮಹೇಂದ್ರ ಸ್ಕಾರ್ಪಿಯೋ ಕಾರ್ ಆಗಿದ್ದು, ವಾಹನದ ಮಾಲೀಕರು ಶ್ರೀ ಕಿರಣ್ ಜೋಸೆಫ್ ಮೆನೆಜಸ್, ಬಿನ್ ವಿಕ್ಟರ್ ಮೆನೆಜಸ್, ಪ್ರೀತಿ ವಿಹಾರ್, ಲೋವರ್ ಬೆಂದೂರು, ಮೂರನೇ ಅಡ್ಡರಸ್ತೆ, ಮಂಗಳೂರುರವರಾಗಿರುತ್ತಾರೆ. ಅವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43B ರನ್ವಯ ನೀಡಲಾದ ಕಾರಣ ಕೇಳಿ ನೋಟೀಸಿಗೆ ಶ್ರೀ ಕಿರಣ್ ಜೋಸೆಫ್ ಮೆನೆಜಸ್ ರವರು ನೀಡಿರುವ ಉತ್ತರದಲ್ಲಿನ ಅಂಶಗಳು ಮತ್ತು 'ಬಿ' ಎಕ್ಸ್‌ಟ್ರಾಕ್ಟ್‌ನಲ್ಲಿ ನಮೂದಿಸಿರುವಂತೆ ಸದರಿಯವರ ವಶದಲ್ಲಿದ್ದ ವಾಹನ ಪ್ರಕರಣ ದಾಖಲಾದ ದಿನದಲ್ಲಿ ಮಡಿಕೇರಿ ಕಡೆಗೆ ಚಲಾಯಿಸಿಲ್ಲವೆಂದು ಸದರಿ ನಂಬರ್ ಪ್ಲೇಟ್ ನಕಲಿ ನಂಬರ್ ಆಗಿರಬಹುದಾಗಿದ್ದು, ಈ ವಾಹನದ ಪ್ರಕರಣಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ. ಸದರಿ ವಾಹನವನ್ನು ಇಲಾಖೆಯ ಕಾನೂನಿನಂತೆ ಕ್ರಮಕೈಗೊಂಡು ತನ್ನ ಮೇಲಿನ ಪ್ರಕರಣವನ್ನು ಕೈಬಿಡಬೇಕಾಗಿ ಕೋರಿರುವುದರಿಂದ ಸದರಿ ವಾಹನ ಸಂ: KA-19-P-2457ರ OPELA ASTRA ಕಾರನ್ನು ವಾರಸುದಾರರಿಲ್ಲದ ಸ್ವತ್ತೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಅಬಕಾರಿ ಕಾಯಿದೆ 1965ರ ಕಲಂ 43C ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿ ಅಬಕಾರಿ ನಿರೀಕ್ಷಕರ ದಿ:5.11.2008 ರಂದು ಲಿಖಿತವಾಗಿ ಸಲ್ಲಿಸಿದ ವರದಿಗೆ ಅಬಕಾರಿ ಉಪ ಅಧೀಕ್ಷಕರು, ಉಪ ವಿಭಾಗ, ಮಡಿಕೇರಿ ಇವರು ದಿ:6.11.2008 ರಂದು ಶಿಫಾರಸ್ಸು ಮಾಡಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನವನ್ನು ವಶಪಡಿಸಿಕೊಂಡು ಸುಮಾರು ಒಂದು ವರ್ಷ ಕಳೆದರೂ ವಾಹನಕ್ಕೆ ಸಂಬಂಧಪಟ್ಟವರಾಗಲೀ ಅವರ ಪರವಕೀಲರಾಗಲೀ ಈ ಪ್ರಾಧಿಕಾರಕ್ಕೆ ಹಾಜರಾಗಿರುವುದಿಲ್ಲ ಹಾಗೂ ಅರ್ಜಿ ಸಲ್ಲಿಸಿರುವುದಿಲ್ಲವಾದರಿಂದ ಅಬಕಾರಿ ನಿರೀಕ್ಷಕರು, ಮಡಿಕೇರಿ ವಲಯ ಮತ್ತು ಅಬಕಾರಿ ಉಪ ಅಧೀಕ್ಷಕರು, ಉಪ ವಿಭಾಗ, ಮಡಿಕೇರಿ ಇವರ ಶಿಫಾರಸ್ಸಿನ ಮೇರೆಗೆ ಮತ್ತು ಶ್ರೀ ಕಿರಣ್ ಜೋಸೆಫ್ ಮೆನೆಜಸ್‌ರವರ ಹೇಳಿಕೆಯ ಹಿನ್ನೆಲೆಯಲ್ಲಿ ಸದರಿ ವಶಪಡಿಸಿಕೊಂಡ ಅಪಲೋ ಅಸ್ಟ್ರಾ ಕಾರ್ ಸಂ:KA-19-P-2457ರನ್ನು ಆರೋಪಿಯು ಅಬಕಾರಿ ಕಾನೂನಿನ ಅರಿವಿದ್ದೆ ತನ್ನ ಲಾಭಕ್ಕಾಗಿ ಸರ್ಕಾರಕ್ಕೆ ವಂಚನೆ ಮಾಡುವ ನೆಪದಲ್ಲಿ ನಕಲಿ ನಂಬರ್ ಪ್ಲೇಟ್ ಬಳಿ ವಾಹನವನ್ನು ಈ ಕೃತ್ಯದಲ್ಲಿ ಬಳಸಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ.

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43A ರಡಿಯಲ್ಲಿ ಪ್ರಕರಣವನ್ನು ದಾಖಲು ಮಾಡಿದ್ದು, ಆರೋಪಿಗಳು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ಜಪ್ತು ಮಾಡಲಾದ ವಾಹನಗಳು ಜಪ್ತುಪಡಿಸಿದ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನು ಬದ್ಧವಾದ ದಾಖಲಾತಿಗಳೊಂದಿಗೆ ಮಾಲೀಕತ್ವವನ್ನು ಕೋರಿ ಪ್ರಾಧಿಕಾರದ ಮುಂದೆ ಬಾರದಿದಲ್ಲಿ ಮತ್ತು ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ 1965ರ

ಕಲಂ 43C ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದಂತಹ ಸ್ವತ್ತುಗಳಾಗಿದ್ದಲ್ಲಿ ಅಕ್ರಮ ಮದ್ಯ ಸಾಗಾಣಿಕೆಗೆ ದಿ:24.07.2007ರಂದು ದಾಖಲಾಗಿರುವ ಅಪರಾಧದಲ್ಲಿ ಬಳಸಿದ ವಾಹನ ಸಂ:KA-19-P-2457ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಈ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಹಾಗೂ ವಾಹನವನ್ನು ಚಾಲನೆಯಿಲ್ಲದೆ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಅದರ ಬಿಡಿಭಾಗಗಳು ತೀರಾ ತುಕ್ಕುಹಿಡಿದು ಹವಾಮಾನದ ವೈಪರೀತ್ಯಕ್ಕೆ ತೀರಾ ಹಾಳಾಗುವ ಸಂಭವ ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳುವುದು ಸೂಕ್ತ ಎಂದು ನಿರ್ಧರಿಸಿದೆ. ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ ಸಂ:ಇಎಕ್ಸ್‌ಇ:ಡಿಟಿಸಿಆರ್‌ಎಂ:93:2007–08, ದಿನಾಂಕ: 18ನೇ ನವೆಂಬರ್ 2008**

ಪ್ರಕರಣದ ಮುಖ್ಯಾಂಶದಲ್ಲಿ ವಿವರಿಸಲಾದ ಸನ್ನಿವೇಶಗಳ ಹಿನ್ನೆಲೆಯಲ್ಲಿ ಸಿ.ಎಲ್. ಜಯರಾಮ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(A)ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(B) ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಆರಕ್ಷಕ ಉಪ ನಿರೀಕ್ಷಕರು, ಮಡಿಕೇರಿ, ಗ್ರಾಮಾಂತರ ಠಾಣೆ, ಮಡಿಕೇರಿ ಇವರ ಮೊ.ಸಂ.123/2007 ದಿ:24.7.2007ರಂದು ವಶಪಡಿಸಿಕೊಂಡ ಅಪಲೋ ಅಸ್ಟ್ರಾ ಕಾರ್ ಸಂ:KA-19-P-2457 ರನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43C ರನ್ವಯ ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನವನ್ನು 30 ದಿನಗಳು ಕಳೆದ ನಂತರ ಕರ್ನಾಟಕ ಅಬಕಾರಿ ಮುಟ್ಟುಗೋಲು ಸ್ವತ್ತುಗಳ ವಿಲೇವಾರಿ ನಿಯಮಗಳ 1967ರ ಅನುಸಾರ ಬಹಿರಂಗ ಹರಾಜು ಮೂಲಕ ವಿಲೇಗೊಳಿಸಲು ಆದೇಶಿಸಿದೆ. ಈ ಆದೇಶವನ್ನು ದಿ:12.11.2008ರಂದು ಬೆರಳಚ್ಚು ಮಾಡಿ, ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 1307

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಕ್ರ: ಬಿ3:ಅಮೊ:ವಾಹನ–09/07–08, ದಿನಾಂಕ: 22ನೇ ನವೆಂಬರ್ 2008**

| | | |
|---|---|---|
| ಉಪಸ್ಥಿತರು | : | ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ. |
| ಪಿರ್ಯಾಧಿದಾರರು | : | ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| ಆರೋಪಿಗಳು | : | ಪತ್ತೆಯಾಗಿರುವುದಿಲ್ಲ. |
| ಭಾದ್ಯತೆದಾರರು | : | ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ:**

ದಿ: 30.08.2007ರಂದು ಸಾಗರ ವಲಯದ ತ್ಯಾಗರ್ತಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ರಾತ್ರಿ ಗಸ್ತು ಮಾಡುತ್ತಿದ್ದಾಗ ಬಿಳಿಸಿರಿ ಗ್ರಾಮದ ಕೊರ್ಲಿಕೊಪ್ಪದ ಲೋಕೋಪಯೋಗಿ ರಸ್ತೆಯಲ್ಲಿ ಒಂದು ದ್ವಿಚಕ್ರ ವಾಹನದಲ್ಲಿ ಲಗೇಜ್ ಹೇರಿಕೊಂಡು ಹೋಗುತ್ತಿರುವುದನ್ನು ತಪಾಸಣೆಗೆ ನಿಲ್ಲಿಸಲು ಸೂಚಿಸಿದಾಗ ವಾಹನದಲ್ಲಿದ್ದ ಇಬ್ಬರು ಅಸಾಮಿಗಳು ವಾಹನವನ್ನು ಅಲ್ಲೇ ಬಿಟ್ಟು ಓಡಿಹೋದರು. ಓಡಿಹೋದ ಅಸಾಮಿಗಳು ಯಾರೆಂದು ತಿಳಿದುಬಂದಿರುವುದಿಲ್ಲ. ನಂತರ ಈ ವಾಹನವನ್ನು ಪರಿಶೀಲಿಸಲಾಗಿ ಟಿ.ವಿ.ಎಸ್.–50 ನೊಂದಣಿ ಸಂಖ್ಯೆ: ಕೆಎ–06–ಜೆ–9484, ಛಾಸ್ಸಿಸ್ ನಂ: A-704-F-611374, ಇಂಜಿನ್ ನಂಬರ್ ಕಂಡು ಬಂದಿರುವುದಿಲ್ಲ. ವಾಹನದಲ್ಲಿದ್ದ ಗೋಣಿಚೀಲವನ್ನು ಬಿಚ್ಚಿ ನೋಡಲಾಗಿ ಬೀಟೆ ಸೈಜ್ 3=0.030ಎಂ3 ಇದ್ದು, ಈ ಸೈಜುಗಳ ಮೇಲೆ ಯಾವುದೇ ಇಲಾಖಾ ಛಾಪಾದ ಗುರುತಿರಲಿಲ್ಲ. ಅಲ್ಲದೇ ಈ ಬೀಟೆ ಸೈಜ್ ಸಾಗಿಸಲು ರಹದಾರಿ ಇರಲಿಲ್ಲ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ದ್ವಿಚಕ್ರವಾಹನ ಮತ್ತು ಬೀಟೆ ಸೈಜನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯೊಂದಿಗೆ ಇಲಾಖಾ ಪರ ಜಪ್ತಿಮಾಡಿ, ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 62, 33, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಸಾಗರ ವಲಯದ ಅ.ಮೊ.ಸಂಖ್ಯೆ: 36/07–08ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 31.08.2007ರಂದು ಆದೇಶವಾಗಿದೆ.

ನಂತರ ವಲಯ ಅರಣ್ಯಾಧಿಕಾರಿ, ಸಾಗರ ಇವರು ದಿ: 04.09.2007 ರಂದು ಈ ನ್ಯಾಯಾಲಯಕ್ಕೆ ವಿಚಾರಣಾ ವರದಿ ಸಲ್ಲಿಸಿ ವಾಹನ ಮತ್ತು ಬೀಟೆ ಸೈಜನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ ಬಿ ಎಕ್ಸ್‌ಟ್ರ್ಯಾಕ್ಟನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ತುಮಕೂರು ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–09/07–08 ದಿ: 06.09.2007ರಲ್ಲಿ ತಿಳಿಸಲಾಗಿತ್ತು. ಈ ವಾಹನದ ಸಿ.ಸಿ.ಯನ್ನು ಸಾಗರ ಪ್ರಾದೇಶಿಕ ಕಛೇರಿಗೆ ದಿ: 26.03.2001ರಂದು ವರ್ಗಾಯಿಸಿದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ತುಮಕೂರು ಇವರು ಪತ್ರ ಸಂಖ್ಯೆ: ಸಾಅಕಿ:ತುಮಕೂರು/07–08 ದಿ: 11.09.2007ರಲ್ಲಿ ಈ ನ್ಯಾಯಾಲಯಕ್ಕೆ ವರದಿಸಿರುತ್ತಾರೆ. ನಂತರ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–09/07–08 ದಿ: 20.09.2007ರಲ್ಲಿ ಪತ್ರ ಬರೆದು ಬಿ ಪ್ರತಿ ಒದಗಿಸಲು ತಿಳಿಸಲಾಗಿತ್ತು. ಇವರಿಂದ ಯಾವುದೇ ವಿವರ ಬಾರದೇ ಇದ್ದುದರಿಂದ ಪುನಃ ದಿ: 08.01.2008ರಂದು ತಿಳುವಳಿಕೆ ಪತ್ರ ಜಾರಿ ಮಾಡಿ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ನಂತರ ಆರ್.ಸಿ. ಮಾಲೀಕರು ನ್ಯಾಯಾಲಯದ ಮೊರೆ ಹೋದಲ್ಲಿ ಅದಕ್ಕೆ ಸಾರಿಗೆ ಅಧಿಕಾರಿ, ಸಾಗರ ಇವರೇ ಜವಾಬ್ದಾರರೆಂದು ಸಹಾ ತಿಳಿಸಲಾಗಿದೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಬಿ3:ಅಮೊ:ವಾಹನ:ಸಿಆರ್–15/07–08ರ ಪ್ರಕಟಣೆಯನ್ನು ದಿ:14.09.2007ರಂದು ಹೊರಡಿಸಿ, ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ: 27.09.2007ರಂದು ಉದಯವಾಣಿ ಪತ್ರಿಕೆಯಲ್ಲಿ ಮತ್ತು ದಿ: 20.12.2007ರಂದು ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 25.10.2008ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ಸೈಜುಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ಸೈಜನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿದೆ. ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರೂ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರ್ಪಡಿಸಿರುವುದಿಲ್ಲ. ಈ ವಾಹನದ ಬಗ್ಗೆ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿ 30 ದಿನಗಳಿಗಿಂತಲೂ ಹೆಚ್ಚು ಕಾಲವಾಗಿರುವುದರಿಂದ ವಾಹನ ಮತ್ತು ಬೀಟೆ ಸೈಜನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ, ಈ ವಾಹನದ ಬಿ ಪ್ರತಿಯನ್ನು ಸಾರಿಗೆ ಅಧಿಕಾರಿ, ಸಾಗರ ಇವರು ಈ ನ್ಯಾಯಾಲಯಕ್ಕೆ ಒದಗಿಸದ ಕಾರಣ ಕರ್ನಾಟಕ ಅರಣ್ಯ ಕಾಯ್ದೆ 1963 ಉಪನಿಯಮ 71(ಬಿ) (1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ನೋಟೀಸ್ ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ. ಅಲ್ಲದೇ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕುಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಂಡು, ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ ಸಾಗರ ವಲಯ ಇವರು ಜಪ್ತಿಮಾಡಿದ ವಾಹನ ಟಿ.ವಿ.ಎಸ್.–50 ನೊಂದಣಿ ಸಂಖ್ಯೆ: ಕೆಎ–06–ಜೆ–9484 (ಛಾಸ್ಸಿಸ್ ನಂ : A-704-F-611374, ಇಂಜಿನ್ ನಂಬರ್ ಕಂಡುಬಂದಿರುವುದಿಲ್ಲ) ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಬೀಟೆ ಸೈಜ್ 03=0.030ಎಂ3 ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ಟಿ.ವಿ.ಎಸ್.–50 ನೊಂದಣಿ ಸಂಖ್ಯೆ: ಕೆಎ–06–ಜೆ–9484 (ಛಾಸ್ಸಿಸ್ ನಂ: A-704-F-611374, ಇಂಜಿನ್ ನಂಬರ್ ಕಂಡುಬಂದಿರುವುದಿಲ್ಲ) ಮತ್ತು ಈ ವಾಹನದಲ್ಲಿದ್ದ ಬೀಟೆ ಸೈಜ್ 03=0.030ಎಂ3 ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 22.11.2008ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 1324

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು, ತುಮಕೂರು ಉಪ ವಿಭಾಗ ತುಮಕೂರು ಇವರ ನಡವಳಿಕೆಗಳು

**ವಿಷಯ:** ಶ್ರೀ ಸಿದ್ದಲಿಂಗಪ್ಪ ಬಿನ್ ಲಕ್ಕಣ್ಣ, ಕಟ್ಟಿಗೇನಹಳ್ಳಿ, ತುಮಕೂರು ತಾಲ್ಲೂಕು, ಇವರ ಸ್ಥಿರಾಸ್ತಿಯನ್ನು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿರುವ ಸ್ಥಿರಾಸ್ತಿಯನ್ನು ಪುನಃ ಸಾಲಗಾರರ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣ ಆದೇಶ ನೀಡುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿ ಆದೇಶ ಸಂ. ಎ.ಆರ್.ಟಿ./ಎ.ಬಿ.ಎನ್./ಸಿ.ಆರ್. 59/2002–2003, ದಿನಾಂಕ:2.5.2002
2. ವ್ಯವಸ್ಥಾಪಕರು, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಪತ್ರದ ದಿನಾಂಕ:29.12.2008

**ಪ್ರಸ್ತಾವನೆ:**

ಶ್ರೀ ಸಿದ್ದಲಿಂಗಪ್ಪ ಬಿನ್ ಲಕ್ಕಣ್ಣ, ಕಟ್ಟಿಗೇನಹಳ್ಳಿ, ತುಮಕೂರು ತಾಲ್ಲೂಕು, ಇವರು ತುಮಕೂರು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನಲ್ಲಿ ಸ್ಥಿರಾಸ್ತಿಯ ಆಧಾರ ಮಾಡಿ ಸಾಲ ಪಡೆದು ಸುಸ್ತಿದಾರರಾಗಿರುವುದರಿಂದ ಇವರಿಂದ ಬರಬೇಕಾದ ಅಸಲು, ಬಡ್ಡಿ, ಇತರೆ ಖರ್ಚು, ಒಟ್ಟು ರೂ, 36,500=00ಗಳ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 70ರ ಅಡಿಯಲ್ಲಿ ಸಹಕಾರ ಸಂಘಗಳ ಉಪನಿಬಂಧಕರು ತುಮಕೂರು ಜಿಲ್ಲೆ ತುಮಕೂರು ಇವರ ನ್ಯಾಯಾಲಯದಲ್ಲಿ ದಾವೆ ಸಂಖ್ಯೆ:1089/97–98 ರಂತೆ ದಾವೆ ಹೂಡಿ ದಿನಾಂಕ:18.6.98 ರಂದು ಅವಾರ್ಡ್ ಪಡೆದು, ತೀರ್ಪಿನ ನಂತರವು ಸಹ ಬಾಕಿ ಹಣವನ್ನು ಬ್ಯಾಂಕಿಗೆ ಜಮಾ ಮಾಡದ ಕಾರಣದಿಂದ ಡಿಕ್ರಿ ಹಣದ ವಸೂಲಾತಿಗಾಗಿ ಅಮಲ್ಜಾರಿ ಸಂಖ್ಯೆ:71/98–99 ರಂತೆ ಅಮಲ್ಜಾರಿ ಪಡೆದು, ದಿನಾಂಕ:9.2.2001 ರಂದು ಬಹಿರಂಗ ಹರಾಜಿಗೆ ಗುರಿಪಡಿಸಿದ್ದು ಬಿಡ್ದುದಾರರು ಬಾರದೇ ಇದ್ದರಿಂದ ಡಿಕ್ರಿ ಬಾಕಿದಾರರ ಸ್ಥಿರ ಸ್ವತ್ತುಗಳನ್ನು ಉಲ್ಲೇಖ (1)ರಲ್ಲಿ ನಮೂದಿಸಿರುವ ಆದೇಶದ ರೀತ್ಯಾ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿ ಆದೇಶ ನೀಡಲಾಗಿತ್ತು.

ವ್ಯವಸ್ಥಾಪಕರು, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರು ಉಲ್ಲೇಖ (2) ರಲ್ಲಿ ನಮೂದಿಸಿರುವ ಪತ್ರದಲ್ಲಿ, ಸಾಲಗಾರರು ದಿನಾಂಕ:29.5.2005 ಮತ್ತು ದಿನಾಂಕ5.8.2006 ರಂದು ಸಾಲ ತೀರುವಳಿ ಮಾಡಿರುತ್ತಾರೆ ಎಂಬುದಾಗಿ ಸಾಲ ತೀರುವಳಿ ದೃಢೀಕರಣಪತ್ರ ನೀಡಿರುತ್ತಾರೆ. ಹಾಗೂ ದಿನಾಂಕ:26.7.2007 ರಂದು ನಡೆದ ಆಡಳಿತಮಂಡಳಿ ಸಭೆಯ ನಡವಳಿಕೆಯಲ್ಲಿ ಸಾಲಗಾರರು ಸಾಲ ತೀರುವಳಿ ಮಾಡಿರುವ ಹಿನ್ನೆಲೆಯಲ್ಲಿ, ಸಾಲಗಾರರಾಗಿದ್ದ ಶ್ರೀ ಸಿದ್ದಲಿಂಗಪ್ಪ ಬಿನ್ ಲಕ್ಕಣ್ಣ, ಕಟ್ಟಿಗೇನಹಳ್ಳಿ, ತುಮಕೂರು ತಾಲ್ಲೂಕು ಇವರ ಸ್ಥಿರಾಸ್ತಿಯನ್ನು ವರ್ಗಾವಣೆ ಮಾಡಲು ಕೋರಿ ತೀರ್ಮಾನಿಸಿರುತ್ತಾರೆ.

ಇವರ ಮನವಿಯನ್ನು ಒಪ್ಪಿ ಉಲ್ಲೇಖ (1)ರಲ್ಲಿ ದಿನಾಂಕ:13.2.2002 ರಂದು ಹೊರಡಿಸಿದ ಆದೇಶದ ಸ್ಥಿರಾಸ್ತಿಗಳನ್ನು ಪುನಃ ಶ್ರೀ ಸಿದ್ದಲಿಂಗಪ್ಪ ಬಿನ್ ಲಕ್ಕಣ್ಣ, ಕಟ್ಟಿಗೇನಹಳ್ಳಿ, ತುಮಕೂರು ತಾಲ್ಲೂಕು ವಾಪಸ್ಸು ನೀಡಲು ಈ ಕೆಳಕಂಡ ಆದೇಶ ಹೊರಡಿಸಿದೆ.

### ಆದೇಶ

**ಕ್ರ.ಸಂ.ಸನಿ 32/ಎ.ಬಿ.ಎನ್./ಸ್ಥಿರಾಸ್ತಿವರ್ಗಾವಣೆ/40/2007–08, ದಿನಾಂಕ: 28ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಗಮನಿಸಿ, ಶ್ರೀ ಗೋಪಾಲರೆಡ್ಡಿ ಕೆ.ಸಿ.ಎಸ್., ಸಹಕಾರ ಸಂಘಗಳ ಸಹಾಯಕನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ತುಮಕೂರು ಉಪವಿಭಾಗ ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 38(ಎ) (15)ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂ.ಡಬ್ಲ್ಯೂ/69/ಸಿ.ಎಲ್.ಎಂ/2001 ದಿನಾಂಕ:21.11.2001ರ ರೀತ್ಯಾ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಉಪಯೋಗಿಸಿ, ಶ್ರೀ ಸಿದ್ದಲಿಂಗಪ್ಪ ಬಿನ್ ಲಕ್ಕಣ್ಣ, ಕಟ್ಟಿಗೇನಹಳ್ಳಿ, ತುಮಕೂರು ತಾಲ್ಲೂಕು, ಇವರ ಸ್ಥಿರಾಸ್ತಿಯನ್ನು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿ ನೀಡಿದ್ದ ಸ್ಥಿರಾಸ್ತಿಯನ್ನು, ಈಗ ಶ್ರೀ ಸಿದ್ದಲಿಂಗಪ್ಪ ಬಿನ್ ಲಕ್ಕಣ್ಣ, ಕಟ್ಟಿಗೇನಹಳ್ಳಿ, ತುಮಕೂರು ತಾಲ್ಲೂಕು ಇವರ ಹೆಸರಿಗೆ ಪುನರ್ ವರ್ಗಾವಣೆ ಮಾಡಿ ಆದೇಶ ನೀಡಿರುತ್ತೇನೆ. ಈ ಆದೇಶಕ್ಕೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಅನ್ವಯ ನಮೂನೆ 8ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಲಗತ್ತಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಚೇರಿಯ ಮುದ್ರೆಯೊಂದಿಗೆ ದಿನಾಂಕ:28.4.2008ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪ ವಿಭಾಗ, ತುಮಕೂರು

**ನಮೂನೆ–VIII**

**ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ಅನುಬಂಧ 38(ಎ) ನೋಡಿ ಅದರ ರೀತ್ಯಾ ಹಾಗೂ**
**ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101 ರನ್ವಯ ಪರಭಾರೆ ಬಗ್ಗೆ ಪ್ರಮಾಣ ಪತ್ರ**
**ಸ್ಥಿರ ಸ್ವತ್ತುಗಳ ವರ್ಗಾವಣೆ ಪ್ರಮಾಣ ಪತ್ರ**

ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕಟ್ಟಿಗೇನಹಳ್ಳಿ, ಗ್ರಾಮದ ವಾಸಿಯಾದ ಶ್ರೀ ಸಿದ್ದಲಿಂಗಪ್ಪ ಬಿನ್ ಲಕ್ಕಣ್ಣ, ಇವರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 71ರ ನ್ವಯ ಆದೇಶವನ್ನು ಜಾರಿ ಮಾಡಿದ್ದರಿಂದ ಸದರಿಯವರ ಸ್ಥಿರ ಸ್ವತ್ತುಗಳನ್ನು ದಿನಾಂಕ:2.5.2002 ರಂದು ಈ ಕಛೇರಿ ಆದೇಶದ ಅಡಿಯಲ್ಲಿ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು, ಇವರಿಗೆ ವರ್ಗಾಯಿಸಿದ್ದು ಸದರಿ ಸಾಲಗಾರರಿಂದ ಬ್ಯಾಂಕಿಗೆ ಬರಬೇಕಾಗಿದ್ದ ಪೂರಾ ಹಣ ಸಂದಾಯವಾಗಿದ್ದು, ಸದರಿ ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ಮರುವರ್ಗಾಯಿಸುವಂತೆ ಬ್ಯಾಂಕಿನ ವ್ಯವಸ್ಥಾಪಕರು ಕೋರಿರುವ ಮೇರೆಗೆ ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕು, ಹಕ್ಕುಬಾಧ್ಯತೆಗಳು ಶ್ರೀ ಸಿದ್ದಲಿಂಗಪ್ಪ ಬಿನ್ ಲಕ್ಕಣ್ಣ, ಕಟ್ಟಿಗೇನಹಳ್ಳಿ, ತುಮಕೂರು ತಾಲ್ಲೂಕು, ಇವರಿಗೆ ನಿರ್ದಿಷ್ಠವಾಗಿರತಕ್ಕದ್ದು, ಮತ್ತು ಈ ಆದೇಶದಂತೆ ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ಒಪ್ಪಿಸತಕ್ಕದ್ದೆಂದು ಅಧಿನಿಯಮ 101 ರನ್ವಯ ಈ ಪ್ರಮಾಣ ಪತ್ರ ನೀಡಲಾಗಿದೆ.

**ಸ್ಥಿರ ಸ್ವತ್ತುಗಳ ವಿವರ**

| ಗ್ರಾಮ | ಸರ್ವೆ ನಂಬರ್ | ವಿಸ್ತೀರ್ಣ | ತರಹೆ | ಹಕ್ಕುದಾರರ ವಿಳಾಸ |
|---|---|---|---|---|
| 1. ಶಿಂಗ್ರಿ ಹಳ್ಳಿ | 15/1 | 4,03 | ಖುಷ್ಕಿ | ಶ್ರೀ ಸಿದ್ದಲಿಂಗಪ್ಪ ಬಿನ್ ಲಕ್ಕಣ್ಣ |

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು

ಪಿ.ಆರ್. 760

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ: ಎಲ್ಎನ್‌ಡಿ [ಎನ್.ಎ] ಸಿಆರ್ 78/2007–08, ಬೆಂಗಳೂರು, ದಿನಾಂಕ: 21ನೇ ಜೂನ್ 2008**

**ವಿಷಯ :** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಬೈಯನಹಳ್ಳಿ ಗ್ರಾಮದ ಸರ್ವೆ ನಂ: 41ರಲ್ಲಿ 2–11 ಎಕರೆ/ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಪತ್ರದ ಸಂಖ್ಯೆ:ಆರ್‌ಡಿ 839 ಎಲ್‌ಜಿಬಿ 2007, ದಿನಾಂಕ:3.8.2007
2. ತಹಶೀಲ್ದಾರ್‌ರವರ ವರದಿ ಸಂಖ್ಯೆ:ಎಲ್ಎನ್‌ಡಿ [ಎನ್.ಎ.]ಸಿಆರ್ 75/2007–08, ದಿನಾಂಕ:15.6.2007.

ಬೆಂಗಳೂರು ಉತ್ತರ (ಆಪರ) ತಾಲ್ಲೂಕು, ಜಾಲ ಹೋಬಳಿ, ಬೈಯನಹಳ್ಳಿ ಗ್ರಾಮದ ಸರ್ವೆ ನಂ:41ರಲ್ಲಿ 2–11 ಎಕರೆ/ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕಾಗಿ ಮಂಜೂರು ಮಾಡುವಂತೆ, ತಹಶೀಲ್ದಾರ್ ರವರು ಉಲ್ಲೇಖ [2] ರಲ್ಲಿ ಸಲ್ಲಿಸಿದ್ದ ವರದಿಯಂತೆ ಬೈಯನಹಳ್ಳಿ ಗ್ರಾಮಕ್ಕೆ ಸ್ಮಶಾನದ ಅಗತ್ಯವಿರುವುದಾಗಿಯೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸತಕ್ಕ ಐಟಂಗಳು ಯಾವುದೂ ಇಲ್ಲವೆಂದು ಈ ಜಮೀನನ್ನು ಸ್ಮಶಾನಕ್ಕೆ ಮೀಸಲಿಡುವಲ್ಲಿ ಗ್ರಾಮಸ್ಥರ ತಂಟೆ ತಕರಾರು ಇಲ್ಲವೆಂದು ತಿಳಿಸಿ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿದ್ದರು.

ತಹಶೀಲ್ದಾರ್‌ರವರ ವರದಿಯಂತೆ ಮೇಲ್ಕಂಡ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಜಾಲ ಹೋಬಳಿ, ಬೈಯನಹಳ್ಳಿ ಗ್ರಾಮದ ಸರ್ವೆ ನಂ:41ರಲ್ಲಿನ 2–11 ಎಕರೆ/ಗುಂಟೆ ಜಮೀನನ್ನು ಬೈಯನಹಳ್ಳಿ ಗ್ರಾಮಸ್ಥರ ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1969ರ ಕಲಂ 71ರಡಿ ಕಾಯ್ದಿರಿಸುವ ಬಗ್ಗೆ ಈ ಕಛೇರಿಯಿಂದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಸರ್ಕಾರವು ಉಲ್ಲೇಖ [1] ರ ಆದೇಶದಲ್ಲಿ ಮೇಲ್ಕಂಡ ಬೈಯನಹಳ್ಳಿ ಗ್ರಾಮದ ಸರ್ವೆ ನಂ:41ರಲ್ಲಿನ 2–11 ಎಕರೆ/ಗುಂಟೆ ಜಮೀನನ್ನು ಸಾರ್ವಜನಿಕ ಸ್ಮಶಾನದ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಜಾಲ ಹೋಬಳಿ, ಬೈಯನಹಳ್ಳಿ ಗ್ರಾಮದ ಸರ್ವೆ ನಂ:41ರಲ್ಲಿನ 2–11 ಎಕರೆ/ಗುಂಟೆ ಜಮೀನನ್ನು ಸ್ಮಶಾನದ ಉದ್ದೇಶಕ್ಕಾಗಿ ಗೋಮಾಳ ಶೀರ್ಷಿಕೆಯಿಂದ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 97[4]ರನ್ವಯ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಲಾಗಿದೆ ಮತ್ತು ಸ್ಮಶಾನದ ನಿರ್ವಹಣೆ/ಉಸ್ತುವಾರಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸಲು ಆದೇಶಿಸಿದೆ.

**ಷರತ್ತುಗಳು**

1 ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯಿತಿಗೆ ವರ್ಗಾಯಿಸತಕ್ಕದ್ದು.

2 ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.

3 ಗ್ರಾಮ ಪಂಚಾಯಿತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್ ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.

4 ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದುಪಡಿಸಲಾಗುವುದು.

5 ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

ಪಿ.ಆರ್. 759

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ನಂ:146, 3ನೇ ಮುಖ್ಯರಸ್ತೆ, 8ನೇ ಅಡ್ಡ ರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–3 ರವರ ಕಾರ್ಯಾಲಯ**

**ಕ್ರ.ಸಂ.:ಡಿಆರ್‌ಬಿ–1/ನೋಂದಣಿ ರದ್ದತಿ /3(ಎ) 2008–09, ದಿನಾಂಕ:3ನೇ ಜುಲೈ 2008**

**ವಿಷಯ :** ಸಮಾಪನೆಯಲ್ಲಿರುವ ದಿ. ಹೇಮಂತ್ ಪೈಲಟ್ ಪ್ರಾಜಕ್ಟ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶೇಷಾದ್ರಿಪುರಂ, ಬೆಂಗಳೂರು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ರವರ ಸಮಾಪನೆ ಆದೇಶ ಸಂಖ್ಯೆ:ಡಿಎಲ್ಎಸ್:ಎಲ್‌ಕ್ಯೂಡಿ:2:94–95 ದಿನಾಂಕ:31.7.1995.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಹಾಗೂ ಸಮಾಪನಾಧಿಕಾರಿಗಳು, ದಿ. ಹೇಮಂತ ಪೈಲೆಟ್ ಪ್ರಾಜೆಕ್ಟ್ ಗೃಹ ನಿರ್ಮಾಣ ಸಹಕಾರ ಸಂಘ ನಿ. ಬೆಂಗಳೂರು ರವರ ಪ್ರಸ್ತಾವನೆ ಕ್ರ.ಸಂಖ್ಯೆ ಸನಿ–44:ನೋಂದಣಿ ರದ್ಧತಿ:25:2008–09 ದಿನಾಂಕ:18.6.2008

**ಪ್ರಸ್ತಾವನೆ:**

ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ ) ಕೇಂದ್ರ ಕಛೇರಿ, ಬೆಂಗಳೂರು ರವರ ಉಲ್ಲೇಖ (1)ರ ಆದೇಶದಲ್ಲಿ ದಿ. ಹೇಮಂತ್ ಪೈಲಟ್ ಪ್ರಾಜಕ್ಟ್ ಗೃಹ ನಿರ್ಮಾಣ ಸಹಕಾರ ಸಂಘ ನಿ. ಶೇಷಾದ್ರಿಪುರಂ, ಬೆಂಗಳೂರು ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72 (2)(ಬಿ) ಅನ್ವಯ ಸಮಾಪನೆಗೊಳಿಸಿ ಕಲಂ 73ರ ಮೇರೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು 1ನೇ ವಲಯ ಬೆಂಗಳೂರು ಇವರನ್ನು ಸಮಾಪನಾಧಿಕಾರಿ ಯನ್ನಾಗಿ ನೇಮಕಾತಿ ಮಾಡಿ, ಸಮಾಪನಾ ಸಂಘದ ಪ್ರಭಾರವನ್ನು ವಹಿಸಿಕೊಂಡು, ಲೆಕ್ಕ ಪರಿಶೋಧನಾ ವರದಿಯ ಆಧಾರದ ಮೇಲೆ ಆದ್ಯತಾ ಪಟ್ಟಿಯನ್ನು ತಯಾರಿಸಿ ನಿಯಮಾನುಸಾರ ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡುವಂತೆ ಸೂಚಿಸಿರುತ್ತಾರೆ.

ಸಮಾಪನೆಗೊಂಡ ಸಂಘದ ಪ್ರಭಾರವನ್ನು ಸುಮಾರು 13 ವರ್ಷಗಳು ಕಳೆದರೂ ಸಹ ಸದರಿ ಸಂಘಕ್ಕೆ ಸಂಬಂಧಿಸಿದ ಲೆಕ್ಕ ಪುಸ್ತಕಗಳಾಗಲೀ ಅಥವಾ ಅಧ್ಯಕ್ಷರು ಅಥವಾ ಕಾರ್ಯಕಾರಿ ಮಂಡಳಿ ಸದಸ್ಯರ ವಿಳಾಸವಾಗಲೀ ಅಥವಾ ಸಂಘದ ಕಾರ್ಯದರ್ಶಿಯವರ ವಿಳಾಸವಾಗಲಿ ಇತರೆ ದಾಖಲಾತಿಗಳಾಗಲಿ ದೊರಕದ ಪ್ರಯುಕ್ತ ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ವಹಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲವೆಂದು ಈ ಕಾರಣದಿಂದ ಸಮಾಪನಾಧಿಕಾರಿಯವರು, ಸ್ವಯಂ ಪ್ರಭಾರ ವಹಿಸಿಕೊಂಡು ದಿನಾಂಕ:26.5.2008 ರಂದು ನಡವಳಿಕೆ ಮಾಡಿರುತ್ತಾರೆ. ಸದರಿ ನಡವಳಿಕೆಯ ಪ್ರಕಾರ ಸಮಾಪನೆಗೊಂಡಿರುವ ಈ ಸಂಘವು ನೋಂದಣಿಯಾಗುವ ಪೂರ್ವದಲ್ಲಿಯೇ ಅಂದರೆ 1977–78 ರಿಂದ ಅನಧಿಕೃತವಾಗಿ ಕಾರ್ಯನಿರ್ವಹಿಸುತ್ತಿದ್ದು, ತದನಂತರ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ರವರ ಕಛೇರಿಯಲ್ಲಿ ನೋಂದಣಿ ಸಂಖ್ಯೆ ಎಆರ್‌ಬಿ–1/ಬಿ/ಆರ್‌ಇಎನ್/5220/1981–82 ದಿನಾಂಕ:12.3.1982 ರಂತೆ ನೋಂದಣಿಯಾಗಿದ್ದು. ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಇರುತ್ತದೆಂದು ತಿಳಿಸಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಅವರ ಆದೇಶ ಸಂಖ್ಯೆ ಹೆಚ್.ಎಸ್.ಜಿ/58/ಹೆಚ್ ಹೆಚ್ಎಸ್/83–84 ದಿನಾಂಕ:20–12–1984 ರಂತೆ ಸಂಘದ ಆಡಳಿತ ಮಂಡಳಿಯನ್ನು ರದ್ದುಪಡಿಸಿ, ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕಾತಿ ಮಾಡಿದ್ದು, ಸಂಘದ ಆಡಳಿತ ಮಂಡಳಿಯವರು ಗೌರವ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:20, 477/1984 ರಂತೆ ದಾಖಲ್ಮಾಡಿ ದಿನಾಂಕ:2.1.1985 ರ ಆದೇಶದಲ್ಲಿ ನಿಬಂಧಕರ ಆಡಳಿತ ಮಂಡಳಿ ರದ್ಧತಿ ಆದೇಶ ದಿನಾಂಕ:20.12.1984 ಕ್ಕೆ ತಡೆಯಾಜ್ಞೆ ತಂದ ಪ್ರಯುಕ್ತ ಉಪ ನಿಬಂಧಕರು, ಬೆಂಗಳೂರು ನಗರ ಜಿಲ್ಲೆ ರವರು ಸಂಘದ ಆಡಳಿತಾಧಿಕಾರಿಯ ಪೂರ್ಣ ಪ್ರಭಾರವನ್ನು ವಹಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಪ್ರಸಕ್ತ ಸಮಾಪನಾಧಿಕಾರಿಯವರು ಉಲ್ಲೇಖ (2) ರಂತೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಸಮಾಪನೆಗೊಂಡಿರುವ ಸಂಘವು ನೋಂದಣಿ ವಿಳಾಸದಲ್ಲಿರುವುದಿಲ್ಲವೆಂದು, ಈ ಸಂಘದ ಬಗ್ಗೆ ಆಸಕ್ತಿಯಿರುವ ಅಥವಾ ಹಿತಾಸಕ್ತಿಯಿರುವ ಸದಸ್ಯರುಗಳಾಗಲಿ ಹಿಂದಿನ ಕಾರ್ಯಕಾರಿ ಸಮಿತಿಯ ಸದಸ್ಯರುಗಳಾಗಲೀ ಅಥವಾ ಸಿಬ್ಬಂದಿಗಳಾಗಲೀ ಸಿಗುತ್ತಿಲ್ಲವೆಂದು ಅಲ್ಲದೆ ಸಂಘವು ಸ್ಥಾಪನೆಯಾದ ದಿನದಿಂದ ಈ ತಹಲ್ ವರೆಗೂ ಸಹ ಸಂಘದ ಲೆಕ್ಕಪತ್ರಗಳನ್ನು ಲೆಕ್ಕ ಪರಿಶೋಧನೆಯಾಗಿರುವುದಿಲ್ಲ ವೆಂದು, ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿಯುಳ್ಳ ಸದಸ್ಯರುಗಳು ಇರುವುದಿಲ್ಲವೆಂದು ಈ ಕಾರಣದಿಂದ ಸಂಘವನ್ನು ಮುಂದುವರಿಸಿಕೊಂಡು ಹೋಗುವುದರಲ್ಲಿ ಸಾರ್ವಜನಿಕರಿಗೆ ಯಾವುದೇ ಪ್ರಯೋಜನ ಆಗದೇ ಇರುವುದರಿಂದ ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಶಿಫಾರಸ್ ಮಾಡಿರುತ್ತಾರೆ.

ಈ ಸಂಘಕ್ಕೆ ಸರ್ಕಾರದಿಂದ ಷೇರು ಸಾಲ ಅಥವಾ ಯಾವುದೇ ಆರ್ಥಿಕ ನೆರವು ಮಂಜೂರಾಗಿರುವುದಿಲ್ಲವೆಂದು ಚೆಕ್ ಲಿಸ್ಟ್‌ನಲ್ಲಿ ಮಾಹಿತಿ ಸಲ್ಲಿಸಿರುತ್ತಾರೆ.

ಸಮಾಪನಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ಸಮಾಪನೆಗೊಂಡಿರುವ ದಿ. ಹೇಮಂತ್ ಪೈಲಟ್, ಗೃಹ ನಿರ್ಮಾಣ ಸಹಕಾರ ಸಂಘವು ನೋಂದಣಿ ಸ್ಥಳದಲ್ಲಿ ಇಲ್ಲದೇ ಇರುವುದನ್ನು ಹಾಗೂ ಈ ಸಂಘದ ಬಗ್ಗೆ ಆಸಕ್ತಿ ಹೊಂದಿರುವ ಸದಸ್ಯರುಗಳಾಗಲೀ ಹಿಂದಿನ ಕಾರ್ಯಕಾರಿ ಸಮಿತಿಯ ಸದಸ್ಯರುಗಳಾಗಲೀ ಅಥವಾ ಹಿತಾಸಕ್ತಿ ಹೊಂದಿರುವ ಸಾರ್ವಜನಿಕರಾಗಲೀ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಪುನಃಶ್ಚೇತನಗೊಳಿಸುವಂತೆ ಈ ಕಛೇರಿಗೆ ಈವರೆಗೂ ಯಾವುದೇ ಅರ್ಜಿಯನ್ನು ಸಲ್ಲಿಸದೇ ಇರುವುದರಿಂದ ಸಂಘದ ಲೆಕ್ಕಪತ್ರಗಳು ಈವರೆಗೂ ಲೆಕ್ಕಪರಿಶೋಧನೆಯಾಗದೇ ಇರುವುದರಿಂದ ಇಂತಹ ಸಂಘವನ್ನು ಹಾಗೆಯೇ ಸಮಾಪನೆಯಲ್ಲಿ ಮುಂದುವರಿಸಿಕೊಂಡು ಹೋಗುವುದರಲ್ಲಿ ಯಾವುದೇ ಪ್ರಯೋಜನವಿಲ್ಲವೆಂದು ಮನಗಂಡು ಸಂಘದ ನೋಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ಅಭಿಪ್ರಾಯಕ್ಕೆ ಬಂದು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಎಂ. ವೆಂಕಟಸ್ವಾಮಿ, ಸಹಕಾರ ಸಂಘಗಳ ಉಪ ನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ಮತ್ತು ಸರ್ಕಾರದ ಅಧಿಸೂಚನೆ ಕ್ರ.ಸಿಎಂಡಬ್ಲ್ಯೂ:69ಸಿಎಲ್ಎಂ:2001 ದಿನಾಂಕ: 21.11.2001 ರನ್ವಯ ಪ್ರತ್ಯಾಯೋಜನೆಯಾದ ಅಧಿಕಾರದ ಮೇರೆಗೆ ದಿ. ಹೇಮಂತ್ ಪೈಲಟ್ ಗೃಹ ನಿರ್ಮಾಣ ಸಹಕಾರ ಸಂಘ ನಿ. ಶೇಷಾದ್ರಿಪುರಂ. ಬೆಂಗಳೂರು ಈ ಸಂಘದ ನೋಂದಣಿ ಕ್ರ.ಸಂಖ್ಯೆ:ಎಆರ್‌ಬಿ–1/ಬಿ/ಆರ್‌ಇಎನ್ 5220/1981–82 ದಿನಾಂಕ:12.3.1982 ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿರುತ್ತೇನೆ. ಈ ದಿನದಿಂದ ಸದರಿ ಸಂಘವು ಕಾರ್ಪೊರೇಟ್ ಬಾಡಿಯಾಗಿರುವ ಅಸ್ತಿತ್ವವನ್ನು ಕಳೆದುಕೊಂಡಿರುತ್ತದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ:30–7–2008 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು–1,
ಬೆಂಗಳೂರು ನಗರ ಜಿಲ್ಲೆ,

ಪಿ.ಆರ್. 942

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಕ್ರ.ಸಂ.:ಡಿಆರ್‌ಕೆ/ಎಲ್ ಕ್ಯೂಡಿ/ಸಿಆರ್ 16/2007–08 ದಿನಾಂಕ: 10ನೇ ಜೂನ್ 2008**

**ವಿಷಯ :** ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಗುಟ್ಲೂರು ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ:ಎಆರ್ 49/ಎಲ್‌ಕ್ಯೂಡಿ/ಸಿಆರ್ 26/2005–06 ದಿನಾಂಕ:17.2.2006 ಮತ್ತು 30.5.2006

**ಪ್ರಸ್ತಾವನೆ:**

ಗುಟ್ಲೂರು ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಆದೇಶದ ಸಂಖ್ಯೆ:ಎಆರ್‌ಕೆ/ ಯೋಜನೆ/ಸಿಆರ್.90/ರಿಜಿಸ್ಟ್ರೇಷನ್/15480/87–88 ದಿನಾಂಕ:18–4–1988ರಂತೆ ನೋಂದಣಿಯಾಗಿದೆ. ಸಂಘದ ಕಾರ್ಯ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇದ್ದು, ಬಂಗಾರಪೇಟೆ ತಾಲ್ಲೂಕಿನ ಗುಟ್ಲೂರು, ವಡಂಪಲ್ಲಿ, ಬೋಡೇನಹಳ್ಳಿ, ದೊಡ್ಡಎಲಚಮುಂದೆ, ಉತ್ತಲಗುಟ್ಟಹಳ್ಳಿ ಗ್ರಾಮಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಈ ಸಂಘವು ಹಲವು ವರ್ಷಗಳಿಂದ ತನ್ನ ಕಾರ್ಯವನ್ನು ನಿರ್ವಹಿಸದೆ 5 ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸದರಿ ಸಂಘವು ತನ್ನ ಬೈಲಾ ರೀತ್ಯಾ ಆಡಳಿತ ಮಂಡಳಿ ಸಭೆ ಮತ್ತು ವಾರ್ಷಿಕ ಮಹಾಸಭೆಗಳು ನಡೆದಿರುವುದಿಲ್ಲ. ಸಂಘದ ಲೆಕ್ಕಪರಿಶೋಧನೆಯು 96–97ನೇ ಸಾಲುಗಳಿಂದ ನಡೆದಿರುವುದಿಲ್ಲ. ಸಂಘಕ್ಕೆ ಸರ್ಕಾರದಿಂದ ಯಾವುದೇ ರೀತಿಯ ಆರ್ಥಿಕ ಸೌಲಭ್ಯಗಳು ಮಂಜೂರಾಗಿರುವುದಿಲ್ಲ.

ಸದರಿ ಸಂಘವು ಡಿಸಿಸಿ ಬ್ಯಾಂಕ್ ನಿ. ಕೆಜಿಎಫ್ ಶಾಖೆಯಲ್ಲಿ ಉಳಿತಾಯ ಖಾತೆಯನ್ನು ಹೊಂದಿದ್ದು ಸದರಿ ಖಾತೆಯಲ್ಲಿ 310–00 ರೂಗಳಷ್ಟು ಮಾತ್ರ ಹೊಂದಿರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಂಘವನ್ನು ಋಣ ಸಮಾಪನೆಗೆ ಒಳಪಡಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘವನ್ನು ಋಣಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001 ರಂತೆ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಗುಟ್ಲೂರು ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಋಣಸಮಾಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು ಸಂಘದ ಸಂಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:10.6.2008 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಕ್ರ.ಸಂ.:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್ 17/2007–08 ದಿನಾಂಕ: 10ನೇ ಜೂನ್ 2008**

**ವಿಷಯ :** ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಬಿಇಎಂಎಲ್ ನೌಕರಿಯಲ್ಲಿದ್ದು ಪವತಿಯಾಗಿರುವ ನೌಕರರ ಅವಲಂಬಿತ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಬಿಇಎಂಎಲ್ ನಗರ, ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ:ಎಆರ್ 49/ಎಲ್‌ಕ್ಯೂಡಿ/ಸಿಆರ್ 3/2005–06 ದಿನಾಂಕ:29.5.2006 ಮತ್ತು 18.2.2006

**ಪ್ರಸ್ತಾವನೆ:**

ಬಿ.ಇ.ಎಂ.ಎಲ್. ನೌಕರಿಯಲ್ಲಿದ್ದು ಪವತಿಯಾಗಿರುವ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಬಿ.ಇ.ಎಂ.ಎಲ್. ನಗರ, ಕೆ.ಜಿ.ಎಫ್ ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಆದೇಶದ ಸಂಖ್ಯೆ:ಎಆರ್ 49 /ಯೋಜನೆ/ಸಿಆರ್.16/ರಿಜಿಸ್ಟ್ರೇಷನ್ 17900/90–91 ದಿನಾಂಕ:18–3–91ರಂತೆ ನೋಂದಣಿಯಾಗಿದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕುಮಟ್ಟಕ್ಕಿಂತ ಕಡಿಮೆ ಇರುತ್ತದೆ. ಸಂಘದ ಆಡಳಿತ ಮಂಡಳಿ ರಚನೆಯಾಗದಂತೆ ಇದ್ದ ಹಿನ್ನೆಲೆಯಲ್ಲಿ ಸಂಘಕ್ಕೆ 28(ಎ)(5)ರ ರೀತ್ಯಾ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿದ್ದು ಸದರಿ ಆಡಳಿತಾಧಿಕಾರಿಗಳ ಅವಧಿ ಮುಕ್ತಾಯವಾಗಿರುವುದರಿಂದ ಹಾಗೂ ಸಂಘವು ಸ್ಥಗಿತಗೊಂಡಿರುವುದರಿಂದ ಆಡಳಿತ ಮಂಡಳಿ ಪುನರ್ ರಚನೆಯಾಗಿರುವುದಿಲ್ಲ ಈ ಸಂಘವು ಹಲವು ವರ್ಷಗಳಿಂದ ತನ್ನ ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುತ್ತದೆ. ಸದರಿ ಸಂಘವು ತನ್ನ ಬೈಲಾ ರೀತ್ಯಾ ಆಡಳಿತ ಮಂಡಳಿ ಸಭೆ ಮತ್ತು ವಾರ್ಷಿಕ ಮಹಾಸಭೆಗಳು ನಡೆದಿರುವುದಿಲ್ಲ. ಸಂಘದ ಲೆಕ್ಕಪರಿಶೋಧನೆಯು 92–93 ನೇ ಸಾಲುಗಳಿಂದ ನಡೆದಿರುವುದಿಲ್ಲ. ಸಂಘಕ್ಕೆ ಸರ್ಕಾರದಿಂದ ಯಾವುದೇ ರೀತಿಯ ಆರ್ಥಿಕ ಸೌಲಭ್ಯಗಳು ಮಂಜೂರಾಗಿರುವುದಿಲ್ಲ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಂಘವನ್ನು ಋಣ ಸಮಾಪನೆಗೆ ಒಳಪಡಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು

ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘವನ್ನು ಋಣ ಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001 ರಂತೆ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಬಿ.ಇ.ಎಂ.ಎಲ್ ನೌಕರಿಯಲ್ಲಿದ್ದು ಪಾವತಿಯಾಗಿರುವ ನೌಕರರ ಅವಲಂಬಿತ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಬಿ.ಇ.ಎಂ.ಎಲ್. ನಗರ ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಋಣ ಸಮಾ–ಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು. ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು ಸಂಘದ ಸಂಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:10.6.2008 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

ಪಿ.ಆರ್. 944

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಕ್ರಸಂ.:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್ 11/2007–08 ದಿನಾಂಕ: 9ನೇ ಜೂನ್ 2008**

**ವಿಷಯ:** ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಉರಿಗಾಂಪೇಟೆ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ:ಎಆರ್ 49/ಸಮಾಪನೆ/ಸಿಆರ್ 2/2008–09 ದಿನಾಂಕ:13.6.2008

**ಪ್ರಸ್ತಾವನೆ:**

ಉರಿಗಾಂಪೇಟೆ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಕೆ.ಜಿಎಫ್ ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಆದೇಶದ ಸಂಖ್ಯೆ:ಎಆರ್ ಕೆ/ಬಿಸಿಆರ್/42/16632/788–89 ದಿನಾಂಕ:16/12/1989 ರಂತೆ ನೋಂದಣಿಯಾಗಿದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕುಮಟ್ಟಕ್ಕಿಂತ ಕಡಿಮೆ ಇದ್ದು. ಕೆಜಿಎಫ್ ಪ್ರದೇಶದ ಉರಿಗಾಂಪೇಟೆ ಬಡಾವಣೆ, ಮಂಜುನಾಥ ಬೌರಿಂಗ್ ಟಾಕೀಸ್ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಈ ಸಂಘದ ಲೆಕ್ಕಪರಿಶೋಧನೆ 94–95 ನೇ ಸಾಲಿನಿಂದ ಈ ತಹಲ್‌ವರೆವಿಗೂ ನಡೆಯಲು ಬಾಕಿ ಇರುತ್ತದೆ. ಸಂಘಕ್ಕೆ ಸರ್ಕಾರದಿಂದ 94–95 ನೇ ಸಾಲಿನಲ್ಲಿ ರೂ. 20000–00 ಮತ್ತು 96–97ನೇ ಸಾಲಿನಲ್ಲಿ ರೂ. 20000–00 ಗಳಷ್ಟು ದುಡಿಯುವ ಬಂಡವಾಳ ಸಾಲ ಮಂಜೂರಾಗಿರುತ್ತದೆ. ಸಂಘವು ಬೈಲಾ ಮತ್ತು ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಆಡಳಿತ ಮಂಡಳಿ ಸಭೆ ಮತ್ತು ವಾರ್ಷಿಕ ಮಹಾಸಭೆಗಳು ನಡೆದಿರುವುದಿಲ್ಲ. ಸದರಿ ಸಂಘಕ್ಕೆ ಸರ್ಕಾರದಿಂದ ಹರಿಜನ/ಗಿರಿಜನ ಸದಸ್ಯರ ಷೇರುಧನ 5625–00, ಮ್ಯಾನೇಜರಿಯನ್ ಕಾಸ್ಟ್ 3000–00 ರೂ ಮತ್ತು ಷೇರು ಬಂಡವಾಳ ರೂ. 5000–00 ಮಂಜೂರಾಗಿರುತ್ತದೆ.

ಸದರಿ ಸಂಘವು ಡಿಸಿಸಿ ಬ್ಯಾಂಕ್ ನಿ., ಕೆಜಿಎಫ್ ಶಾಖೆಯಲ್ಲಿ ಎಸ್.ಬಿ. ಖಾತೆಯನ್ನು ಹೊಂದಿದ್ದು ಸದರಿ ಖಾತೆಯಲ್ಲಿ ದಿನಾಂಕ:10.2.2006ಕ್ಕೆ ರೂ. 113–00 ಗಳನ್ನು ಹೊಂದಿರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಂಘವನ್ನು ಋಣ ಸಮಾಪನೆಗೆ ಒಳಪಡಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘವನ್ನು ಋಣ ಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ:21.11.2001 ರಂತೆ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಉರಿಗಾಂಪೇಟೆ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಋಣಸಮಾಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು ಸಂಘದ ಸಂಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:09.6.2008 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಕ್ರ.ಸಂ.:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್ 15/2007-08 ದಿನಾಂಕ: 9ನೇ ಜೂನ್ 2008**

**ವಿಷಯ:** ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಅಂಡರ್‌ಸನ್‌ಪೇಟೆ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ: ಎಆರ್ 49/ಎಲ್‌ಕ್ಯೂಡಿ/ಸಿಆರ್ 21/2005-06 ದಿನಾಂಕ:30.5.2008

**ಪ್ರಸ್ತಾವನೆ:**

ಅಂಡರ್‌ಸನ್‌ಪೇಟೆ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಕೆ.ಜಿಎಫ್ ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಆದೇಶದ ಸಂಖ್ಯೆ:ಎಆರ್‌ಕೆ/ಬಿಸಿಆರ್/44/ರಿಜಿಸ್ಟ್ರೇಷನ್/8040/82-83 ದಿನಾಂಕ:10-5-1985 ರಂತೆ ನೋಂದಣಿಯಾಗಿದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕುಮಟ್ಟಕ್ಕಿಂತ ಕಡಿಮೆ ಇದ್ದು. ಕೆಜಿಎಫ್ ಪ್ರದೇಶದ ಅಂಡರ್ ಸನ್ ಪೇಟೆ, ಭಾರತೀಪುರ ಗೋಣಿಮಾಕಲಹಳ್ಳಿ, ಗೊಲ್ಲಪಲ್ಲಿಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಈ ಸಂಘವು 96-97 ರಿಂದ ಸ್ಥಗಿತಗೊಂಡಿರುತ್ತದೆ. ಸಂಘಕ್ಕೆ ಸರ್ಕಾರದಿಂದ ರೂ. 20000-00 ಷೇರು, 4500-00 ರೂಗಳಷ್ಟು ಸಹಾಯಧನ ಮಂಜೂರಾಗಿರುತ್ತದೆ. ಸಂಘದ ಲೆಕ್ಕಪರಿಶೋಧನೆಯು 96-97ನೇ ಸಾಲುಗಳಿಂದ ಬಾಕಿ ಇರುತ್ತದೆ. ಸಂಘವು ಬೈಲಾ ರೀತ್ಯಾ ಮತ್ತು ಸಹಕಾರ ಸಂಘಗಳ ಕಾಯ್ದೆ ಕಲಂಗಳ ರೀತ್ಯಾ ಸಂಘದ ಆಡಳಿತ ಮಂಡಳಿ ಸಭೆ ಮತ್ತು ವಾರ್ಷಿಕ ಮಹಾಸಭೆಗಳು ನಡೆಸಿರುವುದಿಲ್ಲ.

ಸದರಿ ಸಂಘವು ಡಿಸಿಸಿ ಬ್ಯಾಂಕ್ ನಿ., ಕೆಜಿಎಫ್ ಶಾಖೆಯಲ್ಲಿ ಎಸ್.ಬಿ. ಖಾತೆಯನ್ನು ಹೊಂದಿದ್ದು ಸದರಿ ಖಾತೆಯಲ್ಲಿ ದಿನಾಂಕ:10.2.2006ಕ್ಕೆ ರೂ. 2880-00 ಗಳನ್ನು ಹೊಂದಿರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಂಘವನ್ನು ಋಣ ಸಮಾಪನೆಗೆ ಒಳಪಡಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘವನ್ನು ಋಣಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ:21.11.2001 ರಂತೆ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಅಂಡರ್‌ಸನ್‌ಪೇಟೆ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಋಣಸಮಾಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು ಸಂಘದ ಸಂಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:9.6.2008 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

ಪಿ.ಆರ್. 943

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ.**

**ಕ್ರ.ಸಂ.:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್ 18/2007–08 ದಿನಾಂಕ: 10ನೇ ಜೂನ್ 2008**

**ವಿಷಯ:** ಬಿ.ಇ.ಎಂ.ಎಲ್. ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಬಿ.ಇ.ಎಂ.ಎಲ್. ನಗರ ಕೆ.ಜಿ.ಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ: ಎಆರ್ 49/ಸಮಾಪನೆ/ಸಿಆರ್ 32/2005–06 ದಿನಾಂಕ:16.2.2004 ಮತ್ತು 13.6.2006.

**ಪ್ರಸ್ತಾವನೆ:**

ಬಿ.ಇ.ಎಂ.ಎಲ್. ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಬಿ.ಇ.ಎಂ.ಎಲ್. ನಗರ ಕೆ.ಜಿಎಫ್ ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಆದೇಶದ ಸಂಖ್ಯೆ:ಎಆರ್‌ಕೆ/5075/77–78 ದಿನಾಂಕ:6–11–1977 ರಂತೆ ನೋಂದಣಿಯಾಗಿದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕುಮಟ್ಟಕ್ಕಿಂತ ಕಡಿಮೆ ಇದ್ದು. ಬಿ.ಇ.ಎಂ.ಎಲ್. ನಗರಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಸಂಘದ ಆಡಳಿತ ಮಂಡಳಿ ರಚನೆಯಾಗದಂತೆ ಇದ್ದ ಹಿನ್ನೆಲೆಯಲ್ಲಿ ಸಂಘಕ್ಕೆ 28(ಎ)(5)ರ ರೀತ್ಯಾ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿದ್ದು ಸದರಿ ಆಡಳಿತಾಧಿಕಾರಿಗಳ ಅವಧಿ ಮುಕ್ತಾಯವಾಗಿರುವುದರಿಂದ ಹಾಗೂ ಸಂಘವು ಸ್ಥಗಿತಗೊಂಡಿರುವುದರಿಂದ ಆಡಳಿತ ಮಂಡಳಿ ಪುನರ್ ರಚನೆಯಾಗಿರುವುದಿಲ್ಲ., ಸಂಘಕ್ಕೆ 92–93ನೇ ಸಾಲಿನಲ್ಲಿ ರೂ. 35000–00 ಗಳ ದುಡಿಯುವ ಬಂಡವಾಳ ಸಾಲ ಮಂಜೂರಾಗಿರುತ್ತದೆ. ಸಂಘದ ಲೆಕ್ಕಪರಿಶೋಧನೆಯು 95–96ನೇ ಸಾಲುಗಳಿಂದ ಬಾಕಿ ಇರುತ್ತದೆ. ಸಂಘದ ಆಡಳಿತ ಮಂಡಳಿ ಸಭೆ ಮತ್ತು ವಾರ್ಷಿಕ ಮಹಾಸಭೆಗಳು ನಡೆದಿರುವುದಿಲ್ಲ.

ಸದರಿ ಸಂಘವು ಡಿಸಿಸಿ ಬ್ಯಾಂಕ್ ನಿ., ಕೆಜಿಎಫ್ ಶಾಖೆಯಲ್ಲಿ ಎಸ್.ಬಿ. ಖಾತೆಯನ್ನು ಹೊಂದಿದ್ದು ಸದರಿ ಖಾತೆಯಲ್ಲಿ ದಿನಾಂಕ:10.2.2006ಕ್ಕೆ ರೂ. 6027–00ಗಳನ್ನು ಹೊಂದಿರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಂಘವನ್ನು ಋಣ ಸಮಾಪನೆಗೆ ಒಳಪಡಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘವನ್ನು ಋಣಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001 ರಂತೆ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಬಿ.ಇ.ಎಂ.ಎಲ್. ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಬಿ.ಇ.ಎಂ.ಎಲ್. ನಗರ ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಋಣಸಮಾಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು 3 ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:10.6.2008 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

ಪಿ.ಆರ್. 892

# ಕರ್ನಾಟಕ ಲೋಕಸೇವಾ ಆಯೋಗ

## ಶಿಸ್ತು ಪ್ರಾಧಿಕಾರಿ ಹಾಗೂ ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ರವರ ನಡವಳಿಗಳು

**ವಿಷಯ:** ಶ್ರೀ ಎಸ್.ಎನ್. ನಂಜುಂಡಪ್ಪ, ದಲಾಯತ್, ಪ್ರಾಂತೀಯ ಕಛೇರಿ, ಬೆಳಗಾವಿ, ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ:**
1) ಪ್ರಾಂತೀಯ ಕಛೇರಿ, ಬೆಳಗಾವಿ, ನೋಟೀಸು ಸಂಖ್ಯೆ:ಪ್ರಾಕಬೆ/232/2006-07/ಪಿಎಸ್‌ಸಿ, ದಿನಾಂಕ: 14.02.2007.
2) ಸಹಾಯಕ ಕಾರ್ಯದರ್ಶಿ, ಪ್ರಾಂತೀಯ ಕಛೇರಿ, ಬೆಳಗಾವಿ, ಇವರ ಪತ್ರ ದಿನಾಂಕ:06-03-2007
3) ಕಾರಣ ಕೇಳುವ ನೋಟೀಸು ಸಂಖ್ಯೆ:ಆಡಳಿತ:22/2007-08/ಪಿಎಸ್‌ಸಿ, ದಿನಾಂಕ:04-04-2007.
4) ತಿಳುವಳಿಕೆ ಪತ್ರ ಸಂಖ್ಯೆ:ಆಡಳಿತ:1232/2007-08/ಪಿಎಸ್‌ಸಿ, ದಿನಾಂಕ:19-09-2007.
5) ಕಛೇರಿ ಆದೇಶ ಸಂಖ್ಯೆ:ಆಡಳಿತ:1731/2007-08/ಪಿಎಸ್‌ಸಿ, ದಿನಾಂಕ:04-12-2007.
6) ಪತ್ರಿಕಾ ಪ್ರಕಟಣೆ ದಿನಾಂಕ:17-02-2008.
7) ವಿಚಾರಣಾ ಅಧಿಕಾರಿಗಳ ವಿಚಾರಣಾ ವರದಿ ದಿನಾಂಕ:13-05-2008.
8) ಎರಡನೇ ಕಾರಣ ಕೇಳುವ ನೋಟೀಸು ಸಂಖ್ಯೆ:ಆಡಳಿತ:559/2008-09/ಪಿಎಸ್‌ಸಿ, ದಿನಾಂಕ: 28.06.2008.

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗದ ಬೆಳಗಾವಿ ಪ್ರಾಂತೀಯ ಕಛೇರಿಯಲ್ಲಿ ದಲಾಯತರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್.ಎನ್.ನಂಜುಂಡಪ್ಪ, ಅವರು ದಿನಾಂಕ:28-12-2006 ರಿಂದ 30-12-2006ರವರೆಗೆ 03 ದಿನಗಳ ಸಾಂದರ್ಭಿಕ ರಜೆ ಕೋರಿ ರಜೆ ಅರ್ಜಿ ಸಲ್ಲಿಸಿ ರಜೆಯ ಮೇಲೆ ತೆರಳಿದ್ದು ಅದು ಮುಗಿದ ನಂತರ ಕರ್ತವ್ಯಕ್ಕೆ ಹಾಜರಾಗದೆ ಇಲ್ಲಿಯವರೆಗೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ. ಅನಂತರ ದಿನಾಂಕ:08-01-2007 ರಿಂದ 12-07-2007ರವರೆಗೆ ವಿವಿಧ ದಿನಾಂಕಗಳಂದು ಕೇವಲ ತಂತಿ ಸಂದೇಶವನ್ನು ಕಳುಹಿಸಿ ವೈದ್ಯಕೀಯ ಕಾರಣದ ಮೇಲೆ ರಜೆ ಮಂಜೂರಾತಿಯನ್ನು ಕೋರಿದ್ದರಾದರೂ ಅದಕ್ಕೆ ಸಂಬಂಧಿಸಿದಂತೆ ಯಾವುದೇ ಪುರಾವೆಯನ್ನು ನೀಡಿರುವುದಿಲ್ಲ. ಹೀಗಾಗಿ ಸಂಬಂಧಿತ ಪ್ರಾಂತೀಯ ಕಛೇರಿಯ ಸಹಾಯಕ ಕಾರ್ಯದರ್ಶಿಯವರು ಉಲ್ಲೇಖ (1)ರಲ್ಲಿ ಓದಲಾದ ದಿನಾಂಕ: 14-02-2007ರ ನೋಟಿಸಿನಲ್ಲಿ ಕೂಡಲೇ ಕಛೇರಿ ಕರ್ತವ್ಯಕ್ಕೆ ಹಾಜರಾಗುವಂತೆ ಹಾಗೂ ಅವರ ಅನಧಿಕೃತ ಗೈರು ಹಾಜರಿಯ ಬಗ್ಗೆ ಸಮಜಾಯಿಷಿ ನೀಡುವಂತೆ ಅವರಿಗೆ ಸೂಚಿಸಿದ್ದರು. ಆದರೆ, ಅದಕ್ಕೆ ಅವರು ಯಾವುದೇ ಪ್ರತಿಕ್ರಿಯೆಯನ್ನು ನೀಡದಿದ್ದ ಕಾರಣ ಅವರು ಈ ಕುರಿತು ಕೇಂದ್ರ ಕಛೇರಿಗೆ ವರದಿ ಸಲ್ಲಿಸಿ ಸೂಕ್ತ ಕ್ರಮ ಕೈಗೊಳ್ಳುವಂತೆ ವಿನಂತಿಸಿದ್ದರ ಮೇರೆಗೆ ಉಲ್ಲೇಖ (4)ರಲ್ಲಿ ಓದಲಾದ ದಿನಾಂಕ:19-09-2007ರ ತಿಳುವಳಿಕೆ ಪತ್ರದಲ್ಲಿ ಆಪಾದಿತರಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಿ ಅದನ್ನು ಅವರು ಕಾರ್ಯನಿರ್ವಹಿಸುತಿದ್ದ ಬೆಳಗಾವಿ ಪ್ರಾಂತೀಯ ಕಛೇರಿ ಹಾಗೂ ಬೆಂಗಳೂರು ಮತ್ತು ಗುಲ್ಬರ್ಗಾದಲ್ಲಿ ನೀಡಲಾದ ಅವರ ನಿವಾಸ ವಿಳಾಸಗಳಿಗೆ ತ್ವರಿತ ಅಂಚೆ (ಅಂಚೆ ಸ್ವೀಕೃತಿ) ಯೊಂದಿಗೆ ಜಾರಿ ಮಾಡಲಾಗಿತ್ತು. ಗುಲ್ಬರ್ಗಾ ವಿಳಾಸಕ್ಕೆ ಜಾರಿ ಮಾಡಲಾಗಿದ್ದ ನೋಟೀಸನ್ನು ಅವರು ದಿನಾಂಕ:28-09-2007ರಂದು ಸ್ವೀಕರಿಸಿದ್ದ ಬಗ್ಗೆ ಅವರಿಂದ ಸ್ವೀಕೃತಿ ಬಂದಿದ್ದು ಇನ್ನುಳಿದಂತೆ ಬೆಳಗಾವಿ ಹಾಗೂ ಬೆಂಗಳೂರಿನ ವಿಳಾಸಗಳಿಗೆ ಜಾರಿ ಮಾಡಲಾದ ತಿಳುವಳಿಕೆ ಪತ್ರಗಳು ಜಾರಿಯಾಗದೆ ವಾಪಸ್ಸು ಬಂದಿರುತ್ತದೆ. ಹೀಗಾಗಿ ಅವರು ನೀಡಿದ್ದ ಬೆಂಗಳೂರಿನ ಖಾಯಂ ವಿಳಾಸವಾದ ಸೊಳ್ಳೇಪುರ, ಹಂಡೇನಹಳ್ಳಿ ಪೋಸ್ಟ್ ಇಲ್ಲಿನ ಅವರ ಮನೆಗೆ ಎರಡನೇ ಬಾರಿ ನೋಟೀಸನ್ನು ಮುದ್ದಾಂ ಆಗಿ ಜಾರಿ ಮಾಡಲು ಪ್ರಯತ್ನಿಸಿ ಅವರು ಲಭ್ಯವಿಲ್ಲದಿದ್ದ ಕಾರಣ ಅವರು ವಾಸವಿದ್ದ ಮನೆಯ ಗೋಡೆಗೆ ಸದರಿ ತಿಳುವಳಿಕೆ ಪತ್ರವನ್ನು ಅಂಟಿಸಲಾಗಿತ್ತು. ಅವರಿಗೆ ಜಾರಿ ಮಾಡಲಾಗಿದ್ದ ಸದರಿ ದೋಷಾರೋಪಣಾ ಪಟ್ಟಿಗೆ ಅವರಿಂದ ಯಾವುದೇ ಲಿಖಿತ ಸಮಜಾಯಿಷಿ ಬಾರದಿದ್ದರಿಂದ ಹಾಗೂ ಅವರು ತಮ್ಮ ಅನಧಿಕೃತ ಗೈರು ಹಾಜರಿಯನ್ನು ಮುಂದುವರೆಸಿದ್ದ ಕಾರಣ ಈ ಕುರಿತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ರಡಿಯಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವುದು ಸೂಕ್ತವೆಂದು ಭಾವಿಸಿ ಅದರಂತೆ ಉಲ್ಲೇಖ (5)ರಲ್ಲಿ ಓದಲಾದ ದಿನಾಂಕ:04-12-2007ರ ಆದೇಶದಲ್ಲಿ ವಿಚಾರಣೆಯನ್ನು ಆದೇಶಿಸಿ ವಿಚಾರಣಾಧಿಕಾರಿಯವರನ್ನು ನೇಮಿಸಲಾಗಿತ್ತು. ಆದರೆ, ಆಪಾದಿತರು ಸದರಿ ವಿಚಾರಣೆಗೂ ಅನಧಿಕೃತವಾಗಿ ಗೈರುಹಾಜರಾದ ಕಾರಣ ದಿನಾಂಕ:03-03-2008ರಂದು ಬೆಳಿಗ್ಗೆ 11-00 ಗಂಟೆಗೆ ವಿಚಾರಣಾಧಿಕಾರಿಯವರ ಮುಂದೆ ವಿಚಾರಣೆಗೆ ಹಾಜರಾಗುವಂತೆ ಸೂಚಿಸಿ ದಿನಾಂಕ:17-02-2008ರ "ಸಂಜೆವಾಣಿ" ಪತ್ರಿಕೆಯ ಬೆಂಗಳೂರು, ಗುಲ್ಬರ್ಗಾ ಹಾಗೂ ಹುಬ್ಬಳ್ಳಿ ಆವೃತ್ತಿಗಳಲ್ಲಿ ಪತ್ರಿಕಾ ಪ್ರಕಟಣೆಯನ್ನು ನೀಡಲಾಗಿದ್ದರೂ ಸಹ ಆಪಾದಿತರು ವಿಚಾರಣೆಗೆ ಹಾಜರಾಗದಿದ್ದ ಕಾರಣ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಏಕಪಕ್ಷೀಯವಾಗಿ ನಡೆಸಿ ಉಲ್ಲೇಖ (7)ರಲ್ಲಿ ಓದಲಾದ ದಿನಾಂಕ:13-05-2008 ರಂದು ವರದಿಯನ್ನು ಸಲ್ಲಿಸಿದ್ದು ಅದರಲ್ಲಿ ಆಪಾದಿತರ ವಿರುದ್ಧ ಮಾಡಲಾದ ಆರೋಪವು ನಿಸ್ಸಂಧಿಗ್ದವಾಗಿ ರುಜುವಾತಾಗಿರುವುದೆಂದು ಅಭಿಪ್ರಾಯಪಟ್ಟಿರುತ್ತಾರೆ. ನಿಯಮಾವಳಿಗಳ ರೀತ್ಯಾ ಅವಶ್ಯವಿರುವಂತೆ ವಿಚಾರಣಾ

ವರದಿಯ ಪ್ರತಿಯೊಂದನ್ನು ಎರಡನೇ ಕಾರಣ ಕೇಳುವ ನೋಟೀಸಿನೊಂದಿಗೆ ಆಪಾದಿತರಿಗೆ ನೀಡಿ ಅವರ ಅಹವಾಲು ಸಲ್ಲಿಸುವಂತೆ ಸೂಚಿಸಲಾಗಿತ್ತು. ಸದರಿ ನೋಟೀಸನ್ನು ದಿನಾಂಕ:27-07-2008ರಂದು ಅವರ ಖಾಯಂ ವಿಳಾಸವಾದ ಸೊಳ್ಳೇಪುರ, ಹಂಡೇನಹಳ್ಳಿ ಪೋಸ್ಟ್, ಸರ್ಜಾಪುರ ಹೋಬಳಿ ಇಲ್ಲಿಗೆ ಮುದ್ದಾಂ ಆಗಿ ಜಾರಿ ಮಾಡಿದ್ದು ಅದನ್ನು ಅವರ ತಾಯಿಯವರು ಸ್ವೀಕರಿಸಿರುತ್ತಾರೆ. ಆದರೆ ಸದರಿ ನೋಟೀಸಿಗೆ ಆಪಾದಿತರು ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ ಬದಲಿಗೆ ತಮ್ಮ ಅನಧಿಕೃತ ಗೈರುಹಾಜರಿಯನ್ನು ಮುಂದುವರೆಸಿರುತ್ತಾರೆ.

ಪ್ರಕರಣದ ಸಂದರ್ಭ, ಸನ್ನಿವೇಶ ಮತ್ತು ಅದಕ್ಕೆ ಸಂಬಂಧಿಸಿದ ದಾಖಲೆಗಳನ್ನು ಹಾಗೂ ವಿಚಾರಣಾಧಿಕಾರಿಗಳ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿರುತ್ತೇನೆ. ಆಪಾದಿತ ನೌಕರರ ವಿರುದ್ಧ ಮಾಡಲಾದ ಅನಧಿಕೃತ ಗೈರು ಹಾಜರಿಯ, ಕರ್ತವ್ಯ ನಿಷ್ಠೆಯ ಲೋಪ, ಈ ಆರೋಪಗಳು ಸಂದೇಹಕ್ಕೆ ಎಡೆ ಇಲ್ಲದಂತೆ ರುಜುವಾತಾಗಿರುತ್ತದೆ ಹಾಗೂ ಇವರ ಅನಧಿಕೃತ ಗೈರುಹಾಜರಿಯು ಸುಮಾರು 02 ವರ್ಷಗಳ ಅವಧಿಯದ್ದಾಗಿದ್ದು ಅದನ್ನು ಗಮನಿಸಿದಲ್ಲಿ ಅವರಿಗೆ ಕರ್ತವ್ಯದ ಬಗ್ಗೆ ಕಿಂಚಿತ್ತೂ ಕಾಳಜಿ ಮತ್ತು ಶ್ರದ್ಧೆ ಇಲ್ಲದಿರುವುದು ಕಂಡು ಬಂದಿರುತ್ತದೆ. ಈ ರೀತಿಯ ಇವರ ನಡವಳಿಕೆಯ ತೀವ್ರ ಅಶಿಸ್ತಿನಿಂದ ಕೂಡಿದ್ದು ಅವರಿಗೆ ನೌಕರಿಯಲ್ಲಿ ಮುಂದುವರೆಯಲು ಆಸಕ್ತಿ ಇಲ್ಲವೆಂಬುದು ವ್ಯಕ್ತವಾಗಿರುತ್ತದೆ. 1958ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 108ರನ್ವಯ ಯಾವುದೇ ಸರ್ಕಾರಿ ನೌಕರನು ನಿರಂತರವಾಗಿ 120 ದಿನಗಳಿಗೂ ಮೇಲ್ಪಟ್ಟು ಅನಧಿಕೃತವಾಗಿ ಗೈರು ಹಾಜರಾದಲ್ಲಿ ಅಂತಹವರನ್ನು ಸೇವೆಯಿಂದ ವಜಾ ಮಾಡಬೇಕಿರುತ್ತದೆ. ಹೀಗಾಗಿ ಇದನ್ನು ಗಂಭೀರವಾಗಿ ಪರಿಗಣಿಸಿ ಆಪಾದಿತ ನೌಕರನು ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅನರ್ಹರೆಂದು ಪರಿಗಣಿಸಿ 1957ರ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ 8(viii) ಮತ್ತು 1958ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳಲ್ಲಿನ ನಿಯಮ 108 ಹಾಗೂ ದಿನಾಂಕ:14-09-2001ರ ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 18 ಸೇಇವಿ 2001ಗಳಲ್ಲಿ ನಿರ್ದಿಷ್ಟಪಡಿಸಲಾದಂತೆ **"ಮತ್ತೆ ಸರ್ಕಾರಿ ನೌಕರಿಯ ಪ್ರವೇಶಕ್ಕೆ ಸಾಮಾನ್ಯವಾಗಿ ಅನರ್ಹತೆಯಾಗತಕ್ಕ ರೀತಿಯಲ್ಲಿ ಸೇವೆಯಿಂದ ವಜಾ ಮಾಡುವ"** ದಂಡನೆಯನ್ನು ವಿಧಿಸುವುದು ಸೂಕ್ತವೆಂದು ಭಾವಿಸಿ ಅದರಂತೆ ಕೆಳಕಂಡಂತೆ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ : ಆಡಳಿತ 1467/2008-09/ಪಿಎಸ್‌ಸಿ, ದಿನಾಂಕ: 10ನೇ ನವೆಂಬರ್, 2008.**

1957ರ ಕರ್ನಾಟಕ ಲೋಕಸೇವಾ ಆಯೋಗದ (ಸೇವಾ ಷರತ್ತುಗಳು) ವಿನಿಯಮ ಹಾಗೂ ಅದನ್ನೊಳಗೊಂಡಂತೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ನೇಮಕಾತಿ ಹಾಗೂ ಶಿಸ್ತು ಪ್ರಾಧಿಕಾರಿಯಾದ ಕರ್ನಾಟಕ ಲೋಕಸೇವಾ ಆಯೋಗದ ಕಾರ್ಯದರ್ಶಿಯಾದ ನಾನು ಮೇಲೆ ವಿವರಿಸಿದ ಸಂದರ್ಭಗಳಲ್ಲಿ ಆಪಾದಿತ ನೌಕರರಾದ ಶ್ರೀ ಎಸ್.ಎನ್.ನಂಜುಂಡಪ್ಪ, ದಲಾಯತ್, ಪ್ರಾಂತೀಯ ಕಛೇರಿ ಬೆಳಗಾವಿ ಇವರಿಗೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 8(viii) ಮತ್ತು 1958ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 108 ಹಾಗೂ ತತ್ಸಂಬಂಧ ಹೊರಡಿಸಲಾದ ಸರ್ಕಾರದ ದಿನಾಂಕ:14-09-2001ರ ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 18 ಸೇಇವಿ 2001ಗಳಲ್ಲಿ ನಿರ್ದಿಷ್ಟಪಡಿಸಲಾದಂತೆ "ಮತ್ತೆ ಸರ್ಕಾರಿ ನೌಕರಿಯ ಪ್ರವೇಶಕ್ಕೆ ಸಾಮಾನ್ಯವಾಗಿ ಅನರ್ಹತೆಯಾಗತಕ್ಕ ರೀತಿಯಲ್ಲಿ ಸೇವೆಯಿಂದ ವಜಾ ಮಾಡುವ" ದಂಡನೆಯನ್ನು ವಿಧಿಸಿರುತ್ತೇನೆ ಹಾಗೂ ದಿನಾಂಕ: 28-12-2006 ರಿಂದ ಇಲ್ಲಿಯವರೆಗಿನ ಇವರ ಅನಧಿಕೃತ ಗೈರು ಹಾಜರಿಯನ್ನು 1958ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 106(ಎ)ರ ರೀತ್ಯಾ ವೇತನ ರಹಿತ ರಜೆಯೆಂದು ಪರಿಗಣಿಸಲು ಆದೇಶಿಸಿರುತ್ತೇನೆ.

**ವಿ.ಬಿ. ಪಾಟೀಲ್**

ಪಿಆರ್.1400 ಶಿಸ್ತು ಪ್ರಾಧಿಕಾರಿ ಹಾಗೂ ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ ಭದ್ರಾವತಿ ವಿಭಾಗ, ಭದ್ರಾವತಿ**

**ಸಂಖ್ಯೆ :ಎ3-ಸಿ.ಓ.ಎಸ್.-ಸಿಆರ್-16/2007-08, ದಿನಾಂಕ:20ನೇ ಮೇ, 2008**

**ವಿಷಯ :-** ಅಕ್ರಮ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಸಂಬಂಧ ಸ್ಕಾರ್ಪಿಯೋ ಟರ್ಬೋ ವಾಹನದ ಸಂ:ಕೆಎ-19-ಪಿ-1059ನ್ನು ವಶಪಡಿಸಿಕೊಂಡ ಬಗ್ಗೆ.

**ಉಲ್ಲೇಖ :-**
1. ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಅಜ್ಜಂಪುರ ಪೊಲೀಸ್ ಠಾಣೆ, ಅಜ್ಜಂಪುರ ರವರ ಠಾಣೆ ಮೊಕದ್ದಮೆ ಸಂ:182/2007, ದಿನಾಂಕ:30-12-2007.
2. ಪೊಲೀಸ್ ವೃತ್ತ ನಿರೀಕ್ಷಕರು, ತರೀಕೆರೆ ರವರ ಪತ್ರ ಸಂ:ಸಿಪಿಐ ಟಿ.ಕೆ.ಸಿ./ಸಿಸಿ/46/2008, ದಿನಾಂಕ: 14-01-2008.
3. ವಲಯ ಅರಣ್ಯಾಧಿಕಾರಿ, ಅಜ್ಜಂಪುರ ಇವರ ಪತ್ರ ಸಂ:379/2007-08 ದಿನಾಂಕ:24-01-2008.
4. ಅಧಿಕಾರಿಯುತ ಅಧಿಕಾರಿಗಳು, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಇವರ ನ್ಯಾಯಾಲಯದ ಪ್ರಕಟಣೆ ಸಮ ಸಂಖ್ಯೆ ದಿನಾಂಕ:18-02-2008ನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ 06-03-2008 ರಂದು ಪ್ರಕಟಿಸಲಾಗಿದೆ.

**ಪ್ರಕಟಣೆಯ ಹಿನ್ನೆಲೆ :**

ದಿನಾಂಕ:14–01–2008 ರಂದು ಅಜ್ಜಂಪುರ ಪೊಲೀಸ್ ಠಾಣೆ, ಪಿ.ಎಸ್.ಐ. ಮತ್ತು ಸಿಬ್ಬಂದಿಯವರು ಶ್ರೀಗಂಧದ ತುಂಡು ಮತ್ತು ಚಕ್ಕೆಗಳು 318 ಕೆ.ಜಿ. ಸಾಗಾಣಿಕೆ ಮಾಡುತ್ತಿದ್ದ ಸ್ಕಾರ್ಪಿಯೋ ಟರ್ಬೋ ವಾಹನದ ಸಂ:ಕೆಎ–19–ಪಿ–1059ನ್ನು ವಶಪಡಿಸಿಕೊಂಡು ಠಾಣೆ ಮೊಕದ್ದಮೆ ಸಂ:182/2007ನ್ನು ದಾಖಲು ಮಾಡಿಕೊಂಡಿರುತ್ತಾರೆ. ಸದರಿ ವಾಹನಕ್ಕೆ ಸಂಬಂಧಿಸಿದ ವಾರಸುದಾರರು ಯಾರೂ ಇಲ್ಲದೇ ಇದ್ದುದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ) ಪ್ರಕಾರ 30 ದಿನಗಳ ಕಾಲಾವಕಾಶ ನೀಡಿ ಯಾರಾದರೂ ವಾರಸುದಾರರು ಇದ್ದರೆ ವಾಹನಕ್ಕೆ ಸಂಬಂಧಿಸಿದ ದಾಖಲಾತಿಗಳ ಸಮೇತ ಹಕ್ಕುಬಾಧ್ಯತೆಗಳನ್ನು ಈ ಕೆಳಗೆ ಸಹಿ ಮಾಡಿದವರ ಮುಂದೆ ಖುದ್ದಾಗಿಯಾಗಲೀ ಅಥವಾ ನ್ಯಾಯವಾದಿಗಳವರ ಮುಖಾಂತರವಾಗಲೀ ಹಾಜರು ಪಡಿಸುವುದಕ್ಕೆ ಹಾಗೂ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸಂಬಂಧದಲ್ಲಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ತಿಳುವಳಿಕೆ ಪತ್ರವನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ದಿ: 06–03–2008 ರಂದು ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಪ್ರಕಟಣೆಯಂತೆ 30 ದಿನಗಳು ದಿನಾಂಕ: 06–04–2008 ಕ್ಕೆ ಮುಕ್ತಾಯಗೊಂಡಿದ್ದು, ವಾಹನದ ಬಗ್ಗೆ ಯಾವ ವಾರಸುದಾರರೂ ತಮ್ಮ ಮಾಲೀಕತ್ವವನ್ನು ದೃಢಪಡಿಸಿ ವಾಹನವನ್ನು ತಮ್ಮ ವಶಕ್ಕೆ ಕೋರಿಕೊಳ್ಳದೆ ಇದ್ದುದರಿಂದ ಸದರಿ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ಉಪಯೋಗಿಸಿರುವುದು ಸ್ಪಷ್ಟವಾಗಿರುತ್ತದೆ.

ಈ ಮೊಕದ್ದಮೆಯಲ್ಲಿ ಸಾಕಷ್ಟು ಕಾಲಾವಕಾಶವನ್ನು ಕೊಟ್ಟರೂ ಸಹ ಮಾಲೀಕರು ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಭದ್ರಾವತಿ ವಿಭಾಗ, ಭದ್ರಾವತಿ ಇವರ ನ್ಯಾಯಾಲಯದ ಮುಂದೆ ಬಂದು ವಾಹನದ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತುಪಡಿಸಿರುವುದಿಲ್ಲವಾದ ಕಾರಣ ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳನುಸಾರವಾಗಿ ಶ್ರೀ ಎಸ್. ವೆಂಕಟೇಸನ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಅರಣ್ಯ ಕಾಯಿದೆ 1963ರ 71ಎ(2) ತಿದ್ದುಪಡಿ ಪ್ರಕಾರ ಸ್ಕಾರ್ಪಿಯೋ ಟರ್ಬೋ ವಾಹನದ ಸಂ: ಕೆಎ–19–ಪಿ–1059ನ್ನು (ಛಾಸಿಸ್ ಸಂ:ಎಂ.ಎ.1.ಟಿಎ2ಬಿಡಿಸಿ52ಕೆ84830 ಯಂತ್ರದ ಸಂ: ಬಿಡಿ54ಜೆ57682 ಹಾಗೂ ಶ್ರೀಗಂಧದ ತುಂಡು ಮತ್ತು ಚಕ್ಕೆಗಳು 318 ಕೆ.ಜಿ.)ನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ವಾಹನ ಅದರ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಹಾಗೆಯೇ ಸದರಿ ವಾಹನವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ ಎಂದು ಆದೇಶಿಸಲಾಗಿದೆ.

ಈ ಆದೇಶವನ್ನು ದಿನಾಂಕ:20–05–2008 ರಂದು ಈ ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಎಸ್. ವೆಂಕಟೇಸನ್**
ಅಧಿಕಾರಿಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ

ಪಿಆರ್.601

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು–52

**ವಿಷಯ :–** ಸಮಾಪನೆಯಲ್ಲಿರುವ ಕೊಡಗು ಜಿಲ್ಲಾ ಮೀನು ಮಾರಾಟ ಸಹಕಾರ ಸಂಘ ನಿ., ಮಡಿಕೇರಿ ಇದರ ನೋಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :–**
1) ಸಹಕಾರ ಸಂಘಗಳ ಉಪನಿಬಂಧಕರು, ಮಡಿಕೇರಿ ಇವರ ಕಛೇರಿ ಪತ್ರ ಸಂಖ್ಯೆ:ಡಿಆರ್ಐ/ಆರ್ಎಸ್ಆರ್/ಎಲ್ಕ್ಯೂಎನ್/2007–08, ದಿ:18–12–2007.
2) ಈ ಕಛೇರಿಯ ಇದೇ ಕ್ರಮಾಂಕದ ಸಮಾಪನಾ ಆದೇಶ ಸಂಖ್ಯೆ/ಆರ್ಸಿಎಸ್/ಎಲ್ಕ್ಯೂಡಿ/65/2005–06, ದಿ:9–12–2005
3) ಸಮಾಪನಾಧಿಕಾರಿಗಳ ಸಭೆಯ ನಡವಳಿಗಳ ದಿ:15–11–2007.

**ಪೀಠಿಕೆ :**

ಕೊಡಗು ಜಿಲ್ಲೆ ಮೀನು ಮಾರಾಟ ಸಹಕಾರ ಸಂಘ ನಿ., ಮಡಿಕೇರಿ ಈ ಸಂಘವು ಸಂಖ್ಯೆ:5989/77–78 ದಿನಾಂಕ:3–3–1978 ರಂತೆ ನೋಂದಣಿಯಾಗಿದ್ದು ಇದರ ಕಾರ್ಯಕ್ಷೇತ್ರವು ಜಿಲ್ಲಾಮಟ್ಟದ್ದಾಗಿರುತ್ತದೆ. ಉಲ್ಲೇಖ (1)ರನ್ವಯ ಸಹಕಾರ ಸಂಘಗಳ ಉಪನಿಬಂಧಕರು, ಮಡಿಕೇರಿ ಇವರು ನೀಡಿದ ವರದಿಯಂತೆ ಸಂಘವು ತನ್ನ ನೋಂದಾಯಿತ

ಉದ್ದೇಶಗಳನ್ನು ಈಡೇರಿಸುವ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರನ್ವಯ ದಿ:9-12-2005ರಂದು ಸಮಾಪನೆಗೊಳಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಡಿಕೇರಿ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ವಹಿಸಿಕೊಂಡು ಸಮಾಪನಾ ನಡವಳಿಗಳನ್ನು ಕೈಗೊಂಡಿದ್ದು ಅದರಂತೆ ದಿ:15-11-2007ರಂದು ಸಮಾಪನಾಧಿಕಾರಿಗಳು ಸಭೆ ಜರುಗಿಸಿ ಸಂಘಕ್ಕೆ ಬರತಕ್ಕ ಹಾಗೂ ಕೊಡತಕ್ಕ ಬಾಬ್ತುಗಳನ್ನು ವಿಲೇವಾರಿ ಮಾಡಿ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿ ಸಂಘದ ಅಡಾವೆಯನ್ನು ಶೂನ್ಯಗೊಳಿಸಿರುತ್ತಾರೆ.

ಸಂಘದಲ್ಲಿ ಯಾವುದೇ ವ್ಯವಹಾರ ಇಲ್ಲದೇ ಇರುವುದರಿಂದ ಸಂಪೂರ್ಣ ಸ್ಥಗಿತಗೊಂಡಿರುವುದರಿಂದ ಸಂಘವನ್ನು ಪುನಃಶ್ಚೇತನಗೊಳಿಸಲು ಯಾವುದೇ ಸದಸ್ಯರು ಮುಂದೆ ಬಾರದೇ ಇರುವುದರಿಂದ ಸದರಿ ಸಂಘವನ್ನು ರದ್ದುಪಡಿಸುವುದು ಸೂಕ್ತವೆಂದು ಸಹಕಾರ ಸಂಘಗಳ ಉಪನಿಬಂಧಕರು, ಮಡಿಕೇರಿ ಇವರು ಅಭಿಪ್ರಾಯಪಟ್ಟು ಶಿಫಾರಸ್ಸು ಮಾಡಿರುತ್ತಾರೆ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕರಿಗಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಮನಗೊಂಡು ಸದರಿ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಪರಿಭಾವಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಕ್ರಸಂ. : ಆರ್‌ಸಿಎಸ್/ಎಲ್‌ಕ್ಯೂಡಿ/65/2005-06, ದಿನಾಂಕ: 20ನೇ ಮೇ 2008**

ಪೀಠಿಕೆಯಲ್ಲಿ ಪ್ರಸ್ತಾಪಿಸಲಾದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಎಂ.ವೆಂಕಟರೆಡ್ಡಿ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಆದ ನಾನು ಕನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರಡಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಕೊಡಗು ಜಿಲ್ಲಾ ಮೀನು ಮಾರಾಟ ಸಹಕಾರ ಸಂಘ ನಿ., ಮಡಿಕೇರಿ ಇದರ ನೋಂದಣಿ ಸಂಖ್ಯೆ:5981/1977-78 ದಿ: 3-3-1978ನ್ನು ರದ್ದುಪಡಿಸಿರುತ್ತೇನೆ. ಈ ನೋಂದಣಿ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ನಿಂತು ಹೋಗಿರುತ್ತದೆಂದು ಸಂಘವು ಅಸ್ತಿತ್ವದಲ್ಲಿಲ್ಲದೆ ವಿಸರ್ಜಿತವಾಗಿದೆಯೆಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:20-5-2008 ರಂದು ಹೊರಡಿಸಲಾಗಿದೆ.

**ಎಂ. ವೆಂಕಟರೆಡ್ಡಿ**

ಪಿಆರ್.603 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ)

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ

**ನಂ.:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-10/2007-08, ದಿನಾಂಕ: 4ನೇ ಜೂನ್ 2008**

**ವಿಷಯ :-** ಸ್ಥಗಿತಗೊಂಡಿರುವ ಗುತ್ತಿದುರ್ಗ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಗುತ್ತಿದುರ್ಗ ಜಗಳೂರು ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :-** (1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಪ್ರಸ್ತಾವನೆ ದಿನಾಂಕ: 26.09.2007.

(2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ:24-10-2007

**ಪ್ರಸ್ತಾವನೆ :**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಉಲ್ಲೇಖ(1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲರಾಗಿರುತ್ತಾರೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ(2)ರ ನೋಟೀಸು ನೀಡಿದ್ದು, ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001. ದಿನಾಂಕ 21-11-2001ರ ಪ್ರಕಾರ ದತ್ತವಾದ

ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ, ಕೆ.ಸಿ.ಎಸ್., ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಗುತ್ತಿದುರ್ಗ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಗುತ್ತಿದುರ್ಗ ಜಗಳೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಜಗಳೂರು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:04-06-2008 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿಆರ್.627 ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ನಂ.:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-06/2007-08, ದಿನಾಂಕ: 4ನೇ ಜೂನ್ 2008**

**ವಿಷಯ :-** ಸ್ಥಗಿತಗೊಂಡಿರುವ ಬಿದರಕೆರೆ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬಿದರಕೆರೆ ಜಗಳೂರು ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :-** (1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಪ್ರಸ್ತಾವನೆ ದಿನಾಂಕ: 11.6.2007.

(2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ:24-10-2007

**ಪ್ರಸ್ತಾವನೆ :**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಉಲ್ಲೇಖ(1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲರಾಗಿರುತ್ತಾರೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ(2)ರ ನೋಟೀಸು ನೀಡಿದ್ದು, ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001. ದಿನಾಂಕ 21-11-2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ, ಕೆ.ಸಿ.ಎಸ್., ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಬಿದರಕೆರೆ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬಿದರಕೆರೆ ಜಗಳೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಜಗಳೂರು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:04-06-2008 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿಆರ್.628 ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ನಂ:146, 3ನೇ ಮುಖ್ಯ ರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-3 ರವರ ಕಾರ್ಯಾಲಯ**

**ಕ್ರ. ಡಿಆರ್‌ಬಿ-1:ನೋಂದಣಿ ರದ್ದತಿ:62:2007-08, ದಿನಾಂಕ: 31ನೇ ಮಾರ್ಚ್ 2008**

**ವಿಷಯ :-** ಸಮಾಪನೆಯಲ್ಲಿರುವ ಸಹಕಾರ ಸಂಘಗಳ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :-** (1) ಸಹಕಾರ ಅಭಿವೃದ್ಧಿ ಅಧಿಕಾರಿ ಬೆಂಗಳೂರು ಉತ್ತರ ತಾಲ್ಲೂಕು ಬೆಂಗಳೂರು ರವರ ಪತ್ರ ಸಂಖ್ಯೆ ಸಅಅ/ಬೆಂ.ಉ.ತಾ/33/2007-08 ದಿನಾಂಕ:26-3-2008.

(2) ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-1, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, 1ನೇ ವಲಯ, ಬೆಂಗಳೂರು ಪತ್ರ ಸಂಖ್ಯೆ ಸಸನಿ:ದಕ್ಷಿಣ-1:52:2007-08, ದಿನಾಂಕ:29.3.2008.

**ಪ್ರಸ್ತಾವನೆ :**

ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಬೆಂಗಳೂರು ಮತ್ತು ಸಹಕಾರ ಸಂಘಗಳ ನಿರೀಕ್ಷಕರು ದಕ್ಷಿಣ-1, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, 1ನೇ ವಲಯ, ಬೆಂಗಳೂರು ಇವರುಗಳು ಉಲ್ಲೇಖ (1) ಮತ್ತು (2) ರಂತೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ-1 ರಲ್ಲಿ ನಮೂದಿಸಿರುವ ಸಮಾಪನೆಗೊಂಡಿರುವ ಸಹಕಾರ ಸಂಘಗಳಲ್ಲಿ ಆಸ್ತಿ ಜವಾಬ್ದಾರಿ ವಿಲೇವಾರಿಗೆ ಯಾವುದೇ ರಹವಿರುವುದಿಲ್ಲವೆಂದು, ಕೆಲವು ಸಹಕಾರ ಸಂಘಗಳ ಅಸ್ತಿತ್ವದ ಬಗ್ಗೆ ದಾಖಲೆಗಳ ಲಭ್ಯತೆ ಬಗ್ಗೆ ಎಷ್ಟೇ ಪ್ರಯತ್ನಿಸಿದರೂ ದೊರಕದ ಪ್ರಯುಕ್ತ ಪ್ರಭಾರವನ್ನು ಪಡೆಯಲು ಸಾಧ್ಯವಾಗಿರುವುದಿಲ್ಲವೆಂದು, ಅಲ್ಲದೇ ಈ ಸಂಘಗಳ ಲೆಕ್ಕಪತ್ರಗಳು ಅನೇಕ ವರ್ಷಗಳಿಂದ ಲೆಕ್ಕ ಪರಿಶೋಧನೆ ಆಗಿರುವುದಿಲ್ಲವೆಂದು ಮತ್ತು ಈ ಸಂಘಗಳು ಯಾವುದೇ ಬ್ಯಾಂಕ್‌ಗಳಲ್ಲಿ ಖಾತೆ ಹೊಂದಿರುವ ಬಗ್ಗೆ ಮಾಹಿತಿ ಲಭ್ಯವಾಗುತ್ತಿಲ್ಲವೆಂದು ಈ ಸಂಘಗಳಿಗೆ ಸರ್ಕಾರದ ವತಿಯಿಂದ ಯಾವುದೇ ಸಾಲವನ್ನಾಗಲೀ, ಷೇರು ಬಂಡವಾಳವನ್ನಾಗಲೀ ನೀಡಿರುವುದು ಕಂಡು ಬರುತ್ತಿಲ್ಲವೆಂದು ಕೆಲವು ಸಂಘಗಳು ಬಹಳ ಹಿಂದೆಯೇ ತಮ್ಮ ಅಸ್ತಿತ್ವ ಕಳೆದುಕೊಂಡಿದ್ದು ಪುನಃಶ್ಚೇತನಗೊಳ್ಳುವ ಸಾಧ್ಯತೆ ಇರುವುದಿಲ್ಲವೆಂದು, ಅಲ್ಲದೇ ಈ ಸಂಘಗಳ ಬಗ್ಗೆ ಆಸಕ್ತಿ ಹೊಂದಿರುವವರಾಗಲೀ ಅಥವಾ ಇವುಗಳ ಅಸ್ತಿತ್ವದ ಬಗ್ಗೆ ತಿಳಿಸುವವರಾಗಲೀ ಸಿಗುತ್ತಿಲ್ಲವೆಂದು ಈ ಸಂಘಗಳ ಬಗ್ಗೆ ಮಾಹಿತಿ ಹೊಂದಿರುವವರು ಅಥವಾ ಆಸಕ್ತಿ ಹೊಂದಿರುವವರು ಇದ್ದಲ್ಲಿ ತಿಳಿಸುವ ಬಗ್ಗೆ ದಿನಾಂಕ:2-3-2005ರ ಸಂಜೆ ವಾಣಿಯ ದಿನಪತ್ರಿಕೆಯಲ್ಲಿ ಪ್ರಕಟಣೆ ನೀಡಿದ್ದರೂ ಯಾರೂ ಸಹ ಈ ಬಗ್ಗೆ ಪ್ರತಿಕ್ರಿಯಿಸಿರುವುದಿಲ್ಲವೆಂದು ಆದ್ದರಿಂದ ಈ ಬಗ್ಗೆ ಆಸಕ್ತಿ ತೋರಿಸುತ್ತಿಲ್ಲವೆಂದು ಸಮಾಪನೆಯಲ್ಲಿರುವ ಈ ಸಂಘಗಳನ್ನು ಹಾಗೇ ಮುಂದುವರಿಸಿಕೊಂಡು ಹೋಗುವುದರಿಂದ ಯಾರಿಗೂ ಪ್ರಯೋಜನವಿಲ್ಲವೆಂದು ನೋಂದಣಿ ರದ್ದತಿಗೆ ಶಿಫಾರಸ್ಸು ಮಾಡಿರುತ್ತಾರೆ.

ಗಂಗಾ ಪತ್ತಿನ ಸಹಕಾರ ಸಂಘದ ಸಮಾಪನಾಧಿಕಾರಿಯವರು ಬಿ.ಡಿ.ಸಿ.ಸಿ. ಬ್ಯಾಂಕ್ ಮತ್ತು ಅಪೆಕ್ಸ್ ಬ್ಯಾಂಕ್ ಉಳಿತಾಯ ಖಾತೆಯಲ್ಲಿದ್ದ ಹಣವನ್ನು ಸಹಕಾರ ಅಭಿವೃದ್ಧಿ ನಿಧಿ ಖಾತೆ ಸಂಖ್ಯೆ 9368ಕ್ಕೆ ರೂ. 42,900/-ಗಳನ್ನು ವರ್ಗಾವಣೆ ಮಾಡಿ ಇತರೆ ಸಾಲದ ಬಾಕಿ ವಸೂಲಾತಿಗೆ ಯಾವುದೇ ಮಾಹಿತಿ ಇರುವುದಿಲ್ಲವೆಂದು ಈ ಸಂಘದ ನೋಂದಣಿಯನ್ನು ಸಹ ರದ್ದುಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸಮಾಪನಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವೆಗಳು ಹಾಗೂ ಕಛೇರಿಯಲ್ಲಿ ಲಭ್ಯವಿರುವ ಮಾಹಿತಿಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಈ ಕೆಳಕಂಡ ಅಂಶಗಳು ವ್ಯಕ್ತವಾಗಿರುತ್ತವೆ.

1) ಸಹಕಾರ ಸಂಘಗಳ ಕಾಯ್ದೆ ಕಲಂ 28 ಎ ಮತ್ತು ನಿಯಮ 14 ರನ್ವಯ ಆಡಳಿತ ಮಂಡಳಿಗೆ ಚುನಾವಣೆ ಮಾಡಿರುವ ಬಗ್ಗೆಯಾಗಲೀ ಕಲಂ 29ಎ (5) ಅಥವಾ 29 (ಎಫ್)(7)ರ ಪ್ರಕಾರ ಚುನಾವಣೆಯಾದ ತರುವಾಯ ಪದಾಧಿಕಾರಿಗಳು ಆಯ್ಕೆಗೊಂಡ ಬಗ್ಗೆಯಾಗಲೀ ಯಾವುದೇ ಮಾಹಿತಿ ಸಲ್ಲಿಸಿರುವುದಿಲ್ಲ/ಅಥವಾ ಕಡತದಲ್ಲಿ ದಾಖಲೆಗಳಿರುವುದಿಲ್ಲ.

2) ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 29 ಜಿ (6)ರನ್ವಯ ಸಂಘದ ಕಾರ್ಯದರ್ಶಿ ಪ್ರತಿ ಮಾಹೆ ಮುಗಿದ 15 ದಿನಗಳೊಳಗೆ ನಗದು ಪುಸ್ತಕದ ಉದ್ಧೃತಭಾಗದ ದೃಢೀಕೃತ ಪ್ರತಿಯನ್ನು ಹಾಗೂ ಆಡಳಿತ ಮಂಡಳಿ ಸಭೆ/ವಾರ್ಷಿಕ ಮಹಾಸಭೆಯ ದೃಢೀಕೃತ ನಡವಳಿಕೆಯ ಪ್ರತಿಯನ್ನು ಸಭೆ ನಡೆದ 15 ದಿನದೊಳಗಾಗಿ ಸಂಬಂಧಿಸಿದ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ.

3) ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 63(4) ರನ್ವಯ ಸಹಕಾರ ವರ್ಷ ಅಂತ್ಯಗೊಳ್ಳುವ 2 ತಿಂಗಳ ಮುಂಚಿತವಾಗಿ ಸಂಘದ ಲೆಕ್ಕ ಪತ್ರಗಳ ಆರ್ಥಿಕ ತಃಖ್ತೆಗಳನ್ನು ಸಂಬಂಧಿಸಿದ ಪ್ರಾಧಿಕಾರಕ್ಕೆ ಕಳುಹಿಸಬೇಕಾಗಿದ್ದು, ಈವರೆವಿಗೂ ಕಳುಹಿಸಿರುವುದಿಲ್ಲ.

4) ಸಂಘಕ್ಕೆ ಕಳುಹಿಸಲಾದ ಎಲ್ಲಾ ರಿಜಿಸ್ಟರ್ಡ್ ಅಂಚೆ ಪತ್ರಗಳು ಜಾರಿಯಾಗದೇ ವಾಪಸ್ ಬಂದಿರುತ್ತವೆ.

5) ಸಂಘದ ಮುಖ್ಯ ಕಾರ್ಯನಿರ್ವಾಹಕರಿಂದಾಗಲಿ, ಆಡಳಿತ ಮಂಡಳಿಗಳಿಂದಾಗಲಿ ಅಥವಾ ಸದಸ್ಯರಿಂದಾಗಲಿ ಯಾವುದೇ ಮಾಹಿತಿ / ಪತ್ರ ವ್ಯವಹಾರವಿರುವುದಿಲ್ಲ.

ಮೇಲೆ ವಿವರಿಸಿರುವ ಅಂಶಗಳನ್ನು ಅವಲೋಕಿಸಿದಾಗ ಅನುಬಂಧ-1 ರಲ್ಲಿ ನಮೂದಿಸಿರುವ ಸಹಕಾರ ಸಂಘಗಳು ಹಲವಾರು ವರ್ಷಗಳಿಂದ ನಿಷ್ಕ್ರಿಯೆಗೊಂಡಿದ್ದು ಸದರಿ ಸಂಘಗಳು ಅಸ್ತಿತ್ವದಲ್ಲಿವೆ ಎಂಬ ಬಗ್ಗೆಯಾಗಲಿ ಅಥವಾ ಲೆಕ್ಕ ಪತ್ರಗಳು ಮತ್ತು ಇತರೇ ದಾಖಲೆಗಳು ಯಾರ ಬಳಿ ಇವೆ ಎಂಬುದರ ಬಗ್ಗೆ ಯಾವುದೇ ರೀತಿಯ ಮಾಹಿತಿ ಇಲ್ಲದಿರುವ ಕಾರಣದಿಂದ ಸಮಾಪನಾಧಿಕಾರಿಯವರು ಕಲಂ 73 ಮತ್ತು 74 ಹಾಗೂ ನಿಯಮ 24 ಮತ್ತು 33 ರಲ್ಲಿ ವಿಧಿಸಿರುವಂತೆ ಸಮಾಪನಾ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ಸಾಧ್ಯವಾಗದೇ ಇರುವುದನ್ನು ಮನಗಂಡು ಅನುಬಂಧ-1 ರಲ್ಲಿ ನಮೂದಿಸಿರುವ ಸಮಾಪನೆಗೊಂಡಿರುವ ಸಹಕಾರ ಸಂಘಗಳ ನೋಂದಣಿಯನ್ನು ರದ್ದುಪಡಿಸಲು ಸೂಕ್ತವೆಂದು ನಾನು ಮನಗಂಡಿದ್ದು, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಎಂ. ವೆಂಕಟಸ್ವಾಮಿ, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ಮತ್ತು ಸರ್ಕಾರದ ಅಧಿಸೂಚನೆ ಕ್ರ.ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21-11-2001 ರನ್ವಯ ಪ್ರತ್ಯಾಯೋಜನೆಯಾದ ಅಧಿಕಾರದ ಮೇರೆಗೆ ಅನುಬಂಧ-1 ರಲ್ಲಿ ನಮೂದಿಸಿರುವ ಸಮಾಪನೆಗೊಂಡಿರುವ ಸಹಕಾರ ಸಂಘಗಳ ನೋಂದಣಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿರುತ್ತೇನೆ. ಈ ದಿನದಿಂದ ಸದರಿ ಸಂಘಗಳು ಕಾರ್ಪೋರೇಟ್ ಬಾಡಿಯಾಗಿರುವ ಅಸ್ತಿತ್ವವನ್ನು ಕಳೆದುಕೊಂಡಿರುತ್ತವೆ.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ:31-3-2008 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು

**ಈ ಕಛೇರಿ ಆದೇಶ ಕ್ರ.ಸಂಖ್ಯೆ ಡಿಆರ್‌ಬಿ-1:ನೊಂ. ರದ್ದತಿ 62:2007-08 ದಿನಾಂಕ:31-3-2008ರ ಅನುಬಂಧ-1**

| ಕ್ರ. ಸಂ. | ಸಂಘದ ಹೆಸರು | ಸಮಾಪನಾ ಆದೇಶ ಸಂಖ್ಯೆ ಮತ್ತು ದಿನಾಂಕ | ನೋಂದಣಿ ಸಂಖ್ಯೆ ಮತ್ತು ದಿನಾಂಕ |
|---|---|---|---|
| 1 | ಶ್ರೀ ನಂಜುಂಡೇಶ್ವರ ಬಳಕೆದಾರರ ಸಹಕಾರ ಸಂಘ (ನಿ) ನಂ.409, 1ನೇ ಮೈನ್, ರಾಜಾಜಿನಗರ, ಬೆಂಗಳೂರು-10 | ಡಿಆರ್‌ಬಿ-1/ಸಮಾಪನೆ34/2005-06 ದಿನಾಂಕ:8-12-2005 | ಎಆರ್‌ಬಿ-44/ಆರ್‌ಇಜಿಎನ್27/19504/92-93 ದಿನಾಂಕ:16-4-1993 |
| 2 | ಶ್ರೀ ವೆಂಕಟೇಶ್ವರ ಬಳಕೆದಾರರ ಸಹಕಾರ ಸಂಘ ನಿ., ನಂ.51, ಚಾಮರಾಜನಗರ, ಜಾಲಹಳ್ಳಿ, ಮುಖ್ಯರಸ್ತೆ, ಬೆಂಗಳೂರು-13 | ಡಿಆರ್‌ಬಿ-1/ಸಮಾಪನೆ 48/2005-06 ದಿನಾಂಕ:13-12-2005 | ಎಆರ್‌ಬಿ-44/ಆರ್‌ಇಜಿಎನ್ 5819497/92-93 ದಿನಾಂಕ:8-2-1993 |
| 3 | ರಾಜಮಹಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ನಂ.59, 10ನೇ ಮುಖ್ಯ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03 | ಡಿಆರ್‌ಬಿ-1/ಸಮಾಪನೆ 25/2006-07 ದಿನಾಂಕ:02-06-2006 | ನಂ.952/1957-58 ದಿನಾಂಕ:2-12-1957 |
| 4 | ಎಸ್.ಸಿ./ಎಸ್.ಟಿ. ಬಳಕೆದಾರರ ಸಹಕಾರ ಸಂಘ (ನಿ), ಶೇಷಾದ್ರಿ ಪುರಂ, ಬೆಂಗಳೂರು | ಡಿಆರ್‌ಬಿ-1/ಸಮಾಪನೆ 38/2005-06 ದಿನಾಂಕ:8-12-2005 | ಎಆರ್‌ಬಿ/ಆರ್‌ಇಜಿಎಸ್/19483/1992-93 ದಿನಾಂಕ:15-1-1992 |
| 5 | ಗಂಗಾ ಪತ್ತಿನ ಸಹಕಾರ ಸಂಘ (ನಿ) ಗಂಗಾನಗರ, ಬೆಂಗಳೂರು. | ಡಿಆರ್‌ಬಿ-1/ಸಮಾಪನೆ 34/2000-01 ದಿನಾಂಕ:31-3-2001 | ಸನಿ/ನೋಂದಣಿ 15033/87-88, ದಿನಾಂಕ : 18-3-1988 |

ಸಹಕಾರ ಸಂಘಗಳ ಉಪನಿಬಂಧಕರು
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು

ಪಿಆರ್.513

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಅಪರ ನಿಬಂಧಕರು(ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಇವರ ನಡವಳಿಗಳು**

**ವಿಷಯ :-** ಸಮಾಪನೆಯಲ್ಲಿರುವ ಬಳ್ಳಾರಿ ಜಿಲ್ಲಾ ಕೋಳಿ ಸಾಕಾಣಿಕೆ ಸಹಕಾರ ಸಂಘ ನಿ., ಬಳ್ಳಾರಿ ಇದರ ನೋಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :–** (1) ಸಹಕಾರ ಸಂಘಗಳ ಜಂಟಿ ನಿಬಂಧಕರು, ಗುಲ್ಬರ್ಗಾ ಪ್ರಾಂತ, ರಾಯಚೂರು ಇವರ ಕಛೇರಿ ಪತ್ರ ಸಂ:ಸಂನಿರಾ:ವಿ–4:ಡಿಐಎಸ್:2006–07 ದಿನಾಂಕ:26–4–2008

(2) ಈ ಕಛೇರಿಯ ಇದೇ ಕ್ರಮಾಂಕದ ಸಮಾಪನಾ ಆದೇಶ ಸಂ:ಆರ್‌ಸಿಎಸ್:ಎಲ್‌ಕ್ಯೂಡಿ:34:2007–08, ದಿ:19–10–2007

(3) ಸಮಾಪನಾಧಿಕಾರಿಗಳ ಸಭೆಯ ನಡವಳಿಗಳ ದಿ:15–2–2008

**ಪ್ರಸ್ತಾವನೆ :**

ಬಳ್ಳಾರಿ ಜಿಲ್ಲಾ ಕೋಳಿ ಸಾಕಾಣಿಕೆ ಸಹಕಾರ ಸಂಘ ನಿ, ಬಳ್ಳಾರಿ ಈ ಸಂಘವು ಸಂಖ್ಯೆ:667/ಜೆಆರ್‌ಸಿ:66–67 ದಿನಾಂಕ:19–11–1966 ರನ್ವಯ ನೋಂದಣಿಯಾಗಿದ್ದು, ಇದರ ಕಾರ್ಯಕ್ಷೇತ್ರವು ಜಿಲ್ಲಾ ಮಟ್ಟದ್ದಾಗಿರುತ್ತದೆ. ಉಲ್ಲೇಖ(1) ರನ್ವಯ ಸಹಕಾರ ಸಂಘಗಳ ಜಂಟಿ ನಿಬಂಧಕರು, ಗುಲ್ಬರ್ಗಾ ಪ್ರಾಂತ, ರಾಯಚೂರು ಇವರ ವರದಿಯನ್ವಯ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(2) ರನ್ವಯ ಸಮಾಪನೆಗೊಳಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬಳ್ಳಾರಿ ಉಪವಿಭಾಗ, ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಸಂಘದ ಅಸ್ತಿತ್ವದ ಬಗ್ಗೆ ಯಾವುದೇ ಸರಿಯಾದ ವಿಳಾಸ ಲಭ್ಯವಿಲ್ಲದ್ದರಿಂದ ಸಂಘದ ಪ್ರಭಾರವನ್ನು ಸ್ವಯಂ ವಹಿಸಿಕೊಂಡು ದಿನಾಂಕ:31–3–2005 ರಲ್ಲಿದ್ದಂತೆ ಆಸ್ತಿ ಜವಾಬ್ದಾರಿ ತಃಖ್ತೆಯನ್ವಯ ಬಿಡಿಸಿಸಿ ಬ್ಯಾಂಕ್‌ನಲ್ಲಿದ್ದ ರೂ.150–00 ಗಳನ್ನು ಡ್ರಾ ಮಾಡಿ ಅಂತಿಮ ಮಹಾಜನ ಸಭೆಯ ಖರ್ಚು ಹಾಕಲಾಗಿದೆ. ಆದರೆ ಪೀಠೋಪಕರಣಗಳ ಬಗ್ಗೆ ಮಾಹಿತಿ ಲಭ್ಯವಿಲ್ಲದ ಪ್ರಯುಕ್ತ ಸದರಿ ಪೀಠೋಪಕರಣಗಳನ್ನು ವಹಿಸಿಕೊಂಡಿರುವುದಿಲ್ಲ. ಹೀಗಾಗಿ ಜವಾಬ್ದಾರಿಗಳನ್ನು ತೀರುವಳಿ ಮಾಡಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಸದರಿ ಪೀಠೋಪಕರಣಗಳ ಮೊಬಲಗನ್ನು ಹಾನಿ ಖಾತೆಗೆ ವರ್ಗಾಯಿಸಿ, ಹೊಂದಾಣಿಕೆ ಮಾಡಿ ದಿನಾಂಕ:15–2–2008 ರಲ್ಲಿದ್ದಂತೆ ಅಡಾವೆ ಪತ್ರಿಕೆಯನ್ನು ಶೂನ್ಯಗೊಳಿಸಿ ಸಂಘದಲ್ಲಿ ಯಾವುದೇ ವ್ಯವಹಾರ ಇಲ್ಲದೇ ಇರುವುದರಿಂದ ಸಂಪೂರ್ಣ ಸ್ಥಗಿತಗೊಂಡಿರುವುದರಿಂದ ಸಂಘವನ್ನು ಪುನಃಶ್ಚೇತನಗೊಳಿಸಲು ಯಾವುದೇ ಸದಸ್ಯರು ಮುಂದೆ ಬಾರದೆ ಇರುವುದರಿಂದ ಸದರಿ ಸಂಘದ ನೋಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ಸಹಕಾರ ಸಂಘಗಳ ಜಂಟಿ ನಿಬಂಧಕರು, ಗುಲ್ಬರ್ಗಾ ಪ್ರಾಂತ, ರಾಯಚೂರು ಇವರು ಅಭಿಪ್ರಾಯಪಟ್ಟು ಶಿಫಾರಸ್ಸು ಮಾಡಿರುತ್ತಾರೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕರಿಗಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಮನಗಂಡು ಸದರಿ ಸಮಾಪನಾ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಪರಿಭಾವಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ ಕ್ರ: ಆರ್‌ಸಿಎಸ್:ಎಲ್‌ಕ್ಯೂಡಿ:34:2007–08**

ಪ್ರಸ್ತಾವನೆಯಲ್ಲಿ ಪ್ರತಿಪಾದಿಸಲಾದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಎಂ.ವೆಂಕಟರೆಡ್ಡಿ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸಮಾಪನೆಗೊಂಡಿರುವ ಬಳ್ಳಾರಿ ಜಿಲ್ಲಾ ಕೋಳಿ ಸಾಕಾಣಿಕೆ ಸಹಕಾರ ಸಂಘ ನಿ, ಬಳ್ಳಾರಿ ಇದರ ನೋಂದಣಿ ಸಂಖ್ಯೆ:667/ಜೆಆರ್‌ಸಿ:1966–67 ದಿನಾಂಕ:19–11–1966ನ್ನು ರದ್ದುಪಡಿಸಿರುತ್ತೇನೆ. ಈ ನೋಂದಣಿ ರದ್ಧತಿಯು ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿರುತ್ತದೆಂದು ಸಂಘವು ಅಸ್ತಿತ್ವದಲ್ಲಿಲ್ಲದೆ ವಿಸರ್ಜಿತವಾಗಿದೆಯೆಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:12–6–2008 ರಂದು ಹೊರಡಿಸಲಾಗಿದೆ.

**ಎಂ. ವೆಂಕಟರೆಡ್ಡಿ**

ಪಿಆರ್.684 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ)

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆರವರ ಕಛೇರಿ**

**ನಂ.146, 8ನೇ ಅಡ್ಡರಸ್ತೆ, 3ನೇ ಮುಖ್ಯರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–03**

**ಕ್ರಮಾಂಕ:ಡಿಆರ್‌ಬಿ–1:ನೋಂ.ರ.:09:2008–09, ದಿನಾಂಕ: 30ನೇ ಆಗಸ್ಟ್ 2008**

**ವಿಷಯ :–** ಸಮಾಪನೆಯಲ್ಲಿರುವ ಸಹಕಾರ ಸಂಘಗಳ ನೋಂದಣಿ ರದ್ದತಿ ಬಗ್ಗೆ

**ಉಲ್ಲೇಖ :–** 1) ಸಹಕಾರ ಸಂಘಗಳ ನಿರೀಕ್ಷಕರು (ದಕ್ಷಿಣ–1), ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಒಂದನೇ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಸನಿ–44/ನಿದ–2/15/2008–09/25

(2) ಸಹಕಾರ ಸಂಘಗಳ ನಿರೀಕ್ಷಕರು (ದಕ್ಷಿಣ–2) ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಒಂದನೇ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಸ.ಸಂ.ನಿ/ರದ್ಧತಿ/37 ಮತ್ತು 40/2008–09 ದಿನಾಂಕ:27–8–2008.

**ಪ್ರಸ್ತಾವನೆ :**

ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–1 ಮತ್ತು 2 ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಒಂದನೇ ವಲಯ, ಬೆಂಗಳೂರು ಇವರು ಉಲ್ಲೇಖಿತ ಪತ್ರಗಳಲ್ಲಿ ಅನುಬಂಧ–1 ರಲ್ಲಿನ ಸಮಾಪನೆಗೊಂಡ ಸಹಕಾರ ಸಂಘಗಳ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸಮಾಪನೆಗೊಂಡಿರುವ ಸಹಕಾರ ಸಂಘಗಳಲ್ಲಿ ಆಸ್ತಿ–ಜವಾಬ್ದಾರಿ ವಿಲೇವಾರಿಗೆ ಯಾವುದೇ ರಹ ಹಾಗೂ ದಾರಿಯಿರುವುದಿಲ್ಲವೆಂದು ಸಹ ತಿಳಿಸಿರುತ್ತಾರೆ. ಈ ಸಹಕಾರ ಸಂಘಗಳನ್ನು ಸಮಾಪನೆಯಲ್ಲಿ ಮುಂದುವರೆಸುವುದರಿಂದ ಯಾರಿಗೂ ಪ್ರಯೋಜನವಾಗುತ್ತಿರಲಿಲ್ಲವೆಂದು ತಿಳಿಸಿ, ಈ ಸಹಕಾರ ಸಂಘಗಳ ನೋಂದಣಿಯ ರದ್ದತಿಗೆ ಶಿಫಾರಸ್ಸು ಮಾಡಿರುತ್ತಾರೆ.

ಸಮಾಪಕರು ಸಹ ಸಂಘದ ಪ್ರಭಾರ ವಹಿಸಿಕೊಳ್ಳಲು ಎಷ್ಟೇ ಪ್ರಯತ್ನಪಟ್ಟರೂ ನೋಂದಾಯಿತ ವಿಳಾಸದಲ್ಲಿ ಸಂಘವು ಇಲ್ಲದಿರುವುದನ್ನು ಮನಗಂಡು ಸಂಘದ ಪ್ರಭಾರವನ್ನು ಸ್ವಯಂಪ್ರಭಾರ ವಹಿಸಿಕೊಂಡಿರುತ್ತಾರೆ ಹಾಗೂ ಈ ರೀತಿಯ ಸಹಕಾರ ಸಂಘವನ್ನು ಮುಂದುವರೆಸುವುದು ಸೂಕ್ತವಲ್ಲವೆಂದು ತಿಳಿಸಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸಮಾಪನೆಯಲ್ಲಿರುವ ಸಹಕಾರ ಸಂಘಗಳ ಕಾರ್ಯವೈಖರಿಯನ್ನು ಪರಿಶೀಲಿಸಿದಾಗ ಕೆಳಕಂಡ ಅಂಶಗಳು ವ್ಯಕ್ತವಾಗುತ್ತವೆ.

1) ಸಂಘದ ವಿಳಾಸ ಬದಲಾವಣೆ ಆಗಿದ್ದಲ್ಲಿ ಆ ಬಗ್ಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರಿಗಾಗಲೀ ಅಥವಾ ಈ ಕಛೇರಿಗಾಗಲೀ ಯಾವುದೇ ಮಾಹಿತಿ ಸಲ್ಲಿಸಿರುವುದಿಲ್ಲ.
2) ಸಹಕಾರ ಸಂಘಗಳ ಕಾಯ್ದೆ ಕಲಂ 28ಎ ಮತ್ತು ನಿಯಮ 14 ರನ್ವಯ ಆಡಳಿತ ಮಂಡಳಿಗೆ ಚುನಾವಣೆ ಮಾಡಿರುವ ಬಗ್ಗೆಯಾಗಲೀ ಸಹಕಾರ ಸಂಘಗಳ ಕಾಯ್ದೆ ಕಲಂ 29ಎ(5) ಅಥವಾ 29(ಎಫ್)(7) ರ ಪ್ರಕಾರ ಚುನಾವಣೆಯಾದ ತರುವಾಯ ಪದಾಧಿಕಾರಿಗಳು ಆಯ್ಕೆಗೊಂಡ ಬಗ್ಗೆಯಾಗಲೀ ಯಾವುದೇ ಮಾಹಿತಿ ಸಲ್ಲಿಸಿರುವುದಿಲ್ಲ.
3) ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 29ಬಿ(6)ರನ್ವಯ ಸಂಘದ ಕಾರ್ಯದರ್ಶಿ ಪ್ರತಿ ಮಾಹೆ ಮುಗಿದ 15 ದಿನಗಳೊಳಗಾಗಿ ನಗದು ಪುಸ್ತಕದ ಉದ್ಧೃತ ಭಾಗದ ದೃಢೀಕೃತ ಪ್ರತಿಯನ್ನು ಹಾಗೂ ಆಡಳಿತ ಮಂಡಳಿ ಸಭೆ/ವಾರ್ಷಿಕ ಮಹಾಸಭೆಯ ದೃಢೀಕೃತ ನಡವಳಿಕೆಯ ಪ್ರತಿಯನ್ನು ಸಭೆ ನಡೆದ 15 ದಿವಸದೊಳಗಾಗಿ ಸಂಬಂಧಪಟ್ಟ ನಿಬಂಧಕರಿಗೆ ಸಲ್ಲಿಸಬೇಕಾಗಿದ್ದು ಸಲ್ಲಿಸಿರುವುದಿಲ್ಲ.
4) ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 63(4) ರನ್ವಯ ಸಹಕಾರಿ ವರ್ಷ ಅಂತ್ಯಗೊಳ್ಳುವ 2 ತಿಂಗಳು ಮುಂಚಿತವಾಗಿ ಸಂಘದ ಲೆಕ್ಕ ಪತ್ರಗಳ ಆರ್ಥಿಕ ತಃಖ್ತೆಗಳನ್ನು ನಿಬಂಧಕರಿಗೆ ಕಳುಹಿಸಬೇಕಾಗಿದ್ದು, ಇದುವರೆವಿಗೂ ಕಳುಹಿಸಿರುವುದಿಲ್ಲ.
5) ಪ್ರತಿ ವರ್ಷವೂ ಇಲಾಖೆಗೆ ವಾರ್ಷಿಕ ಅಂಕಿ–ಅಂಶ ತಃಖ್ತೆಗಳನ್ನು ಸಲ್ಲಿಸಬೇಕಾಗಿದ್ದು, ಹಲವಾರು ವರ್ಷಗಳಿಂದ ಸಲ್ಲಿಸಿರುವುದಿಲ್ಲ.
6) ಸಂಘವು ಸದಸ್ಯರುಗಳ ಏಳಿಗೆಗಾಗಿ ಕಾರ್ಯನಿರ್ವಹಿಸುತ್ತಿದೆ ಎಂಬುದರ ಬಗ್ಗೆ ಯಾವುದೇ ಸಂದರ್ಭದಲ್ಲಿ ಮಾಹಿತಿಯನ್ನು ಈ ಕಛೇರಿಗೆ ಸಲ್ಲಿಸಿರುವುದಿಲ್ಲ.

ಮೇಲೆ ವಿವರಿಸಿರುವ ಅಂಶಗಳನ್ನು ಅವಲೋಕಿಸಿದಾಗ ಅನುಬಂಧ–1 ರಲ್ಲಿ ನಮೂದಿಸಿರುವ ಸಹಕಾರ ಸಂಘಗಳು ಹಲವಾರು ವರ್ಷಗಳಿಂದ ನಿಷ್ಕ್ರಿಯಗೊಂಡಿದ್ದು, ಸದರಿ ಸಂಘಗಳು ಅಸ್ತಿತ್ವದಲ್ಲಿದೆ ಎಂಬ ಬಗ್ಗೆ ಮತ್ತು ಇದರ ಲೆಕ್ಕಪತ್ರಗಳು ಯಾರ ಬಳಿ ಇವೆ ಎಂಬುದರ ಬಗ್ಗೆ ಯಾವುದೇ ರೀತಿಯ ಮಾಹಿತಿ ಇಲ್ಲದಿರುವುದಕ್ಕೆ ಪರಿಣಾಮವಾಗಿ ಸಮಾಪಕರು ಸಹಕಾರ ಕಾಯ್ದೆ ಕಲಂ : 73 ಮತ್ತು 74 ಹಾಗೂ ಸಹಕಾರ ಸಂಘಗಳ ನಿಯಮಾವಳಿಗಳ ನಿಯಮ 24 ಮತ್ತು 33 ರಲ್ಲಿ ವಿಧಿಸಿರುವಂತೆ ಸಮಾಪನಾ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ಸಾಧ್ಯತೆ ಇಲ್ಲದಿರುವುದನ್ನು ಮನಗಾಣಲಾಗಿದೆ. ಸದರಿ ಸಂಘಗಳನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ರೀತಿಯ ಉಪಯೋಗ ಇಲ್ಲದಿರುವುದನ್ನು ಗಮನಿಸಲಾಗಿದೆ. ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–1 ಮತ್ತು ದಕ್ಷಿಣ–2 ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ 1ನೇ ವಲಯ, ಬೆಂಗಳೂರು ಇವರು ಅನುಬಂಧ–1ರಲ್ಲಿ ನಮೂದಿಸಿರುವ ಸಹಕಾರ ಸಂಘಗಳ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುವುದರಿಂದ ಹಾಗೂ ತತ್ಸಂಬಂಧವಾದ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರನ್ವಯ ಸದರಿ ಸಂಘಗಳ ನೋಂದಣಿಯನ್ನು ರದ್ದುಪಡಿಸಬಹುದೆಂಬ ಅಭಿಪ್ರಾಯಕ್ಕೆ ಬಂದು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ನಮೂದಿಸಿರುವ ಅಂಶಗಳನ್ನು ಪರಿಗಣಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿ:21–11–2001 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಎಂ. ವೆಂಕಟಸ್ವಾಮಿ, ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಅನುಬಂಧ–1ರಲ್ಲಿ ತಿಳಿಸಿದ ಸಹಕಾರ ಸಂಘಗಳ ನೋಂದಣಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲು ಆದೇಶಿಸಿದ್ದೇನೆ. ಈ ದಿನದಿಂದ ಸಂಘಗಳು ಕಾರ್ಪೋರೇಟ್ ಬಾಡಿಯಾಗಿರುವ ಅಸ್ತಿತ್ವವನ್ನು ಕಳೆದುಕೊಂಡಿದೆ.

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ:30–8–2008 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು

**ಈ ಕಛೇರಿಯ ಆದೇಶ ಕ್ರಮ ಸಂಖ್ಯೆ:ಡಿಆರ್‌ಬಿ–1/ನೋಂದಣಿ ರದ್ದತಿ/09/2008–09 ಆದೇಶ ದಿನಾಂಕ:30–8–2008 ಕ್ಕೆ ಅನುಬಂಧ–1**

| ಕ್ರ. ಸಂ. | ಸಂಘದ ಹೆಸರು | ನೋಂದಣಿ ಸಂಖ್ಯೆ | ಸಮಾಪನೆ ಆದೇಶ | ಸಮಾಪನಾಧಿಕಾರಿಯ ಹೆಸರು ಮತ್ತು ಪದನಾಮ |
|---|---|---|---|---|
| 1 | 2 | 3 | 4 | 5 |
| 1 | ಕಾಮಾಕ್ಷಿಪಾಳ್ಯ ಸಿಲ್ಕ್ ಹ್ಯಾಂಡ್‌ಲೂಮ್ ಸಹಕಾರ ಸಂಘ ನಿ., ಬೆಂಗಳೂರು | ಎಆರ್‌ಬಿ–2/ಆರ್‌ಇಜಿಎನ್/9650/ 82–83 ದಿನಾಂಕ:29–9–1982 | ಡಿಆರ್‌ಬಿ–1/ಎಲ್‌ಕ್ಯೂಡಿ/10/1999–2000 ದಿ:30–11–99 | ಶ್ರೀ ಎಸ್.ರಮಾನಂದ, ಸ.ಸಂ. ನಿರೀಕ್ಷಕರು, ದಕ್ಷಿಣ–2 |
| 2 | ಸ್ಟರ್ಲಿಂಗ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು | –"– | ಡಿಆರ್‌ಬಿ/ಎಲ್‌ಕ್ಯೂಡಿ/46 1996–97 ದಿ:17–2–96 | ಶ್ರೀ ಟಿ.ಜಯಶೇಖರ್ ಸ.ಸಂ.ನಿರೀಕ್ಷಕರು, ದಕ್ಷಿಣ–1 |
| 3 | ಚೈತನ್ಯ ಎಸ್‌ಸಿ/ಎಸ್‌ಟಿ ಸೈಟ್ ಓನರ್ಸ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು | ಎಆರ್‌ಬಿ–1/ಬಿ/ಆರ್‌ಇಜಿಎನ್/5222/81–82 ದಿನಾಂಕ:12–8–1982 | ಡಿಆರ್‌ಬಿ–1/ಎಲ್‌ಕ್ಯೂಡಿ/ 64/1998–99 ದಿ:30–3–99 | ಶ್ರೀ ಟಿ.ಜಯಶೇಖರ್ ಸ.ಸಂ. ನಿರೀಕ್ಷಕರು, ದಕ್ಷಿಣ–1 |

ಪಿಆರ್.1111 ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಅಪರ ನಿಬಂಧಕರು(ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ನಂ.1 ಅಲಿ ಆಸ್ಕರ್ ರಸ್ತೆ, ಬೆಂಗಳೂರು ಇವರ ನಡವಳಿಗಳು**

**ವಿಷಯ :–** ಸಮಾಪನೆಯಲ್ಲಿರುವ ಬಳ್ಳಾರಿ ಜಿಲ್ಲಾ ಮಾಜಿ ಸೈನಿಕರ ಹಾಗೂ ಆಟೋ ಚಾಲಕರ ಸಹಕಾರ ಸಂಘ ನಿ., ಬಳ್ಳಾರಿ ಇದರ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :–** (1) ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಗುಲ್ಬರ್ಗಾ ಪ್ರಾಂತ, ರಾಯಚೂರು ಇವರ ಕಛೇರಿ ಪತ್ರ ಸಂಖ್ಯೆ:ಸಂನಿರಾ/ವಿ–41/ಡಿಡಿಎಸ್/06–07 ದಿ:26–4–08.

(2) ಈ ಕಛೇರಿಯ ಇದೇ ಕ್ರಮಾಂಕದ ಸಮಾಪನಾ ಆದೇಶದ ಸಂಖ್ಯೆ:ಆರ್‌ಸಿಎಸ್./ಎಲ್‌ಕ್ಯೂಡಿ/ 35/2007–08, ದಿ:12–10–07

(3) ಸಮಾಪನಾಧಿಕಾರಿಗಳ ಸಭೆಯ ನಡವಳಿಗಳ ದಿ:15–2–2008

**ಪ್ರಸ್ತಾವನೆ :**

ಬಳ್ಳಾರಿ ಜಿಲ್ಲಾ ಮಾಜಿ ಸೈನಿಕರ ಹಾಗೂ ಆಟೋ ಚಾಲಕರ ಸಹಕಾರ ಸಂಘ ನಿ., ಬಳ್ಳಾರಿ ಈ ಸಂಘವು ಸಂಖ್ಯೆ:ಎಸ್–1 ಜೆಆರ್‌ಸಿ:71–72/5261/65 ದಿನಾಂಕ:21–10–1971 ರನ್ವಯ ನೋಂದಣಿಯಾಗಿದ್ದು, ಇದರ ಕಾರ್ಯಕ್ಷೇತ್ರವು ಜಿಲ್ಲಾ ಮಟ್ಟದ್ದಾಗಿರುತ್ತದೆ. ಉಲ್ಲೇಖ(1) ರನ್ವಯ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಗುಲ್ಬರ್ಗಾ ಪ್ರಾಂತ, ರಾಯಚೂರು ಇವರ ವರದಿಯಂತೆ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(2) ರನ್ವಯ ಸಮಾಪನೆಗೊಳಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬಳ್ಳಾರಿ ಉಪವಿಭಾಗ, ಬಳ್ಳಾರಿ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಸಂಘದ ಅಸ್ತಿತ್ವದ ಬಗ್ಗೆ ಯಾವುದೇ ಸರಿಯಾದ ವಿಳಾಸ ಲಭ್ಯವಿಲ್ಲದ್ದರಿಂದ ಸಂಘದ ಪ್ರಭಾರವನ್ನು ಸ್ವಯಂ ಪ್ರಭಾರ ವಹಿಸಿಕೊಂಡು ದಿನಾಂಕ:31–3–1995 ರನ್ವಯ ವಸೂಲಾತಿ ಮಾಡಬೇಕಾದ ಆಸ್ತಿಗಳ ಬಗ್ಗೆ ಪರಿಶೀಲಿಸಿದಾಗ ದಿ:23–9–2006ರಲ್ಲಿ ಈಗಾಗಲೇ ಬಿ.ಡಿ.ಸಿ.ಸಿ. ಬ್ಯಾಂಕ್ ನಿ., ಬಳ್ಳಾರಿ ಮುಖ್ಯ ಶಾಖೆಯವರು ನೀಡಿದ ಸ್ಥಿರೀಕರಣ ಪತ್ರದ ರೀತ್ಯಾ ಬ್ಯಾಂಕಿನಲ್ಲಿ ಯಾವುದೇ ಖಾತೆಯಲ್ಲಿ ಹಣ ಇರುವುದಿಲ್ಲವೆಂದು ಖಾತರಿಪಡಿಸಿಕೊಳ್ಳಲಾಗಿರುತ್ತೆ. ಸಂಘವು ರೂ.530–00ಗಳಷ್ಟು ನಷ್ಟದಲ್ಲಿರುತ್ತದೆ. ಹೀಗಾಗಿ ಸಂಘದ ಜವಾಬ್ದಾರಿಗಳನ್ನು ತೀರುವಳಿ ಮಾಡಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿ ಸಮಾಪನಾಧಿಕಾರಿಗಳು ದಿ: 15–2–2008ರಂದು ಅಂತಿಮ ಮಹಾಸಭೆ ನಡವಳಿಕೆಯಲ್ಲಿ ಸಂಘದ ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿ ಸಂಘವು ಕೊಡತಕ್ಕ ಮತ್ತು ಸಂಘಕ್ಕೆ ಬರತಕ್ಕ ಬಾಬ್ತು ಯಾವುದು ಇಲ್ಲದಿರುವುದರಿಂದ ನೋಂದಣಿಯನ್ನು ರದ್ದುಪಡಿಸಲು ತೀರ್ಮಾನಿಸಿರುತ್ತಾರೆ.

ಅದರಂತೆ ಸಂಘಧಲ್ಲಿ ಯಾವುದೇ ವ್ಯವಹಾರ ಇಲ್ಲದೇ ಸಂಪೂರ್ಣ ಸ್ಥಗಿತಗೊಂಡಿರುವುದರಿಂದ ಸಂಘವನ್ನು ಪುನಃಶ್ಚೇತನಗೊಳಿಸಲು ಯಾವುದೇ ಸದಸ್ಯರು ಮುಂದೆ ಬಾರದೇ ಇರುವುದರಿಂದ ಸದರಿ ಸಂಘದ ನೋಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಗುಲ್ಬರ್ಗಾ ಪ್ರಾಂತ ರಾಯಚೂರು ಇವರು ಅಭಿಪ್ರಾಯಪಟ್ಟು ಶಿಫಾರಸ್ಸು ಮಾಡಿರುತ್ತಾರೆ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕರಿಗಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಮನಗಂಡು ಸದರಿ ಸಮಾಪನಾ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಪರಿಭಾವಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ ಕ್ರ: ಆರ್‌ಸಿಎಸ್:ಎಲ್‌ಕ್ಯೂಡಿ:35:2007–08, ದಿನಾಂಕ: 12ನೇ ಜೂನ್ 2008**

ಪೀಠಿಕೆಯಲ್ಲಿ ಪ್ರತಿಪಾದಿಸಲಾದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಎಂ.ವೆಂಕಟರೆಡ್ಡಿ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸಮಾಪನೆಗೊಂಡಿರುವ ಬಳ್ಳಾರಿ ಜಿಲ್ಲಾ ಮಾಜಿ ಸೈನಿಕರ ಹಾಗೂ ಆಟೋ ಚಾಲಕರ ಸಹಕಾರ ಸಂಘ ನಿ, ಬಳ್ಳಾರಿ ಇದರ ನೋಂದಣಿ ಸಂಖ್ಯೆ:ಎಸ್–1/ಜೆಆರ್‌ಸಿ:71–72/5261/65 ದಿನಾಂಕ:21–10–1971ನ್ನು ರದ್ದುಪಡಿಸಿರುತ್ತೇನೆ. ಈ ನೋಂದಣಿ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿರುತ್ತದೆಂದು ಸಂಘವು ಅಸ್ತಿತ್ವದಲ್ಲಿಲ್ಲದೆ ವಿಸರ್ಜಿತವಾಗಿದೆಯೆಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:12–6–2008 ರಂದು ಹೊರಡಿಸಲಾಗಿದೆ.

**ಎಂ. ವೆಂಕಟರೆಡ್ಡಿ**

ಪಿಆರ್.685 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ)

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇದರ ನಡವಳಿಗಳು**

**ನಂ. ಡಿಆರ್‌ಟಿ/ಡಿಎಲ್‌ಎಸ್/17/2004–05, ದಿನಾಂಕ: 1ನೇ ಡಿಸೆಂಬರ್ 2008**

**ವಿಷಯ :–** ಸಮಾಪನೆಗೊಂಡಿರುವ ಸರ್ಕಾರಿ ಪ್ರೌಢಶಾಲಾ ಉಪಾಧ್ಯಾಯರ ಬಳಕೆದಾರರ ಸಹಕಾರ ಸಂಘ ನಿಯಮಿತ, ಮಧುಗಿರಿ ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :–**
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ:21–11–2001.
2) ಈ ಕಛೇರಿಯ ಸಮ ಸಂಖ್ಯೆ ಆದೇಶ ದಿ:29–12–2006 ಮತ್ತು 31–5–2008
3) ಸಮಾಪನಾಧಿಕಾರಿ ಹಾಗೂ ನಿರೀಕ್ಷಕರು, ಮಧುಗಿರಿ ತಾ: ಇವರ ಪ್ರಸ್ತಾವನೆ ಪತ್ರ ದಿ:28–10–2008.

**ಪ್ರಸ್ತಾವನೆ :**

ಸರ್ಕಾರಿ ಪ್ರೌಢಶಾಲಾ ಉಪಾಧ್ಯಾಯರ ಬಳಕೆದಾರರ ಸಹಕಾರ ಸಂಘ ನಿಯಮಿತ, ಮಧುಗಿರಿ ಈ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿದ್ದ ಕಾರಣದಿಂದ ಉಲ್ಲೇಖಿತ(2) ರ ಈ ಕಛೇರಿ ಆದೇಶ ದಿ:29–12–2006ರಲ್ಲಿ ಸಂಘವನ್ನು ಸಮಾಪನೆಗೊಳಿಸಿ ನಿರೀಕ್ಷಕರು (ಮಾರಾಟ ಶಾಖೆ), ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಧುಗಿರಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ನಂತರ ಉಲ್ಲೇಖಿತ (2)ರ ಆದೇಶ ದಿನಾಂಕ: 31–5–2008ರಲ್ಲಿ ಆಡಳಿತಾತ್ಮಕ ಕಾರಣದಿಂದ ನಿರೀಕ್ಷಕರು ಮಧುಗಿರಿ ತಾಲ್ಲೂಕು ಇವರನ್ನು ಬದಲೀ ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು.

ಸಮಾಪನಾಧಿಕಾರಿಯು ಸಮಾಪನಾ ಪ್ರಕ್ರಿಯೆಯನ್ನು ಪೂರ್ಣಗೊಳಿಸಿ ಉಲ್ಲೇಖಿತ (3)ರ ಪತ್ರದೊಂದಿಗೆ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸಿ ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸಮಾಪನಾಧಿಕಾರಿಗಳ ಸಭೆ ದಿನಾಂಕ:1–10–2006 ರ ಸಭೆ ವಿಷಯ ಸಂಖ್ಯೆ (1) ಮತ್ತು (2)ರ ನಿರ್ಣಯದಲ್ಲಿ ನಗದು ಶಿಲ್ಕು ರೂ. 298–00 ಮತ್ತು ಜಿಲ್ಲಾ ಬ್ಯಾಂಕಿನಲ್ಲಿ ಸಂಘದ ಚಾಲ್ತಿ ಖಾತೆಯಲ್ಲಿದ್ದ ರೂ. 4,750–00 ಗಳನ್ನು ಡ್ರಾ ಮಾಡಿ ಒಟ್ಟು ರೂ. 5,048–00 ಗಳಿಂದ ಲೆಕ್ಕ ಪರಿಶೋಧನಾ ಶುಲ್ಕ ರೂ. 2,000–00 ಗಳನ್ನು ಪಾವತಿಸಲು ತೀರ್ಮಾನಿಸಿರುತ್ತಾರೆ. ಉಳಿದ ರೂ. 3,048–00 ಗಳನ್ನು ಸಂಘದ ಸಾದಿಲ್ವಾರು, ಲೆಕ್ಕ ಪರಿಶೋಧನಾ ವರದಿಗಳನ್ನು ಸಿದ್ದಪಡಿಸಲು ಮತ್ತು ಸಮಾಪನಾ ಪ್ರಕ್ರಿಯೆಯ ನಿರ್ವಹಣಾ ವೆಚ್ಚವಾಗಿ ಭರಿಸಲು ತೀರ್ಮಾನಿಸಿ ಸದರಿ ಮೊತ್ತಗಳನ್ನು ಪಾವತಿಸಿರುವ ಜಮಾ ಖರ್ಚು ತಃಖ್ತೆಯನ್ನು ತಯಾರಿಸಿ ಹಿರಿಯ ಲೆಕ್ಕ ಪರಿಶೋಧಕರಿಂದ ದೃಢೀಕರಿಸಿರುತ್ತಾರೆ. ಸಂಘದಲ್ಲಿ ವಸೂಲಿಯಾಗುವಂತಹ ಇತರೆ ಯಾವುದೇ ಆಸ್ತಿಗಳು ಇಲ್ಲದ ಕಾರಣ ಅವುಗಳನ್ನು ನಷ್ಟದ ಖಾತೆಗೆ ವರ್ಗಾಯಿಸಿರುತ್ತಾರೆ. ಜವಾಬ್ದಾರಿಗಳನ್ನು ತೀರುವಳಿ ಮಾಡಲು ಸಂಘದಲ್ಲಿ ಯಾವುದೇ ರಹ ಇಲ್ಲದ ಕಾರಣ ಆಸ್ತಿ ಜವಾಬ್ದಾರಿಗಳನ್ನು ಶೂನ್ಯ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸಲು ತೀರ್ಮಾನಿಸಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ನಮೂದಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ಹಾಗೂ ಉಲ್ಲೇಖ(1) ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಡಿ. ಪಾಂಡುರಂಗಪ್ಪ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಸಮಾಪನೆಗೊಂಡಿರುವ ಸರ್ಕಾರಿ ಪ್ರೌಢಶಾಲಾ ಉಪಾಧ್ಯಾಯರ ಬಳಕೆದಾರರ ಸಹಕಾರ ಸಂಘ ನಿಯಮಿತ, ಮಧುಗಿರಿ ಈ ಸಂಘದ ನೋಂದಣಿ ಸಂಖ್ಯೆ ಎಆರ್‌ಟಿ/282 ದಿನಾಂಕ:27–10–1938ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ. ಇಂದಿನಿಂದ ಸಂಘವು ಅಸ್ತಿತ್ವದಲ್ಲಿರುವುದಿಲ್ಲ ಮತ್ತು ವಿಸರ್ಜಿತವಾಗಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:01–12–2008 ರಂದು ಹೊರಡಿಸಲಾಗಿದೆ.

ಪಿಆರ್.1399 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ತುಮಕೂರು ಉಪ ವಿಭಾಗ ತುಮಕೂರು ಇವರ ನಡವಳಿಕೆಗಳು**

**ವಿಷಯ :–** ಶ್ರೀ ಗಂಗರಾಜು ಬಿನ್ ಕೆಂಪಯ್ಯ, ಅಪ್ಪಿನಾಯಕನಹಳ್ಳಿ, ತುಮಕೂರು ತಾಲ್ಲೂಕು, ಇವರ ಸ್ಥಿರಾಸ್ತಿಯನ್ನು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿರುವ ಸ್ಥಿರಾಸ್ತಿಯನ್ನು ಪುನಃ ಸಾಲಗಾರರ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣ ಆದೇಶ ನೀಡುವ ಬಗ್ಗೆ.

**ಉಲ್ಲೇಖ :–** (1) ಈ ಕಛೇರಿ ಆದೇಶ ಸಂ.ಎಆರ್.ಟಿ./ಎ.ಬಿ.ಎನ್./ಸಿಆರ್.875/ 2001–2002. ದಿನಾಂಕ:13.2.2002

(2) ವ್ಯವಸ್ಥಾಪಕರು, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಪತ್ರದ ದಿನಾಂಕ:2.4.2008.

**ಪ್ರಸ್ತಾವನೆ :**

ಶ್ರೀ ಗಂಗರಾಜು ಬಿನ್ ಕೆಂಪಯ್ಯ, ಅಪ್ಪಿನಾಯಕನಹಳ್ಳಿ ತುಮಕೂರು ತಾಲ್ಲೂಕು, ಇವರು ತುಮಕೂರು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನಲ್ಲಿ ಸ್ಥಿರಾಸ್ತಿಯ ಆಧಾರ ಮಾಡಿ ಸಾಲ ಪಡೆದು ಸುಸ್ತಿದಾರರಾಗಿರುವುದರಿಂದ ಇವರಿಂದ ಬರಬೇಕಾದ ಅಸಲು, ಬಡ್ಡಿ, ಇತರೆ ಖರ್ಚು ಒಟ್ಟು ರೂ.64,900–00ಗಳ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 70 ರ ಅಡಿಯಲ್ಲಿ ಸಹಕಾರ ಸಂಘಗಳ ಉಪನಿಬಂಧಕರು ತುಮಕೂರು ಜಿಲ್ಲೆ ತುಮಕೂರು ಇವರ ನ್ಯಾಯಾಲಯದಲ್ಲಿ ದಾವೆ ಸಂಖ್ಯೆ:2155/96–97 ರಂತೆ ದಾವೆ ಹೂಡಿ ದಿನಾಂಕ:26.2.97 ರಂದು ಅವಾರ್ಡ್ ಪಡೆದು, ತೀರ್ಪಿನ ನಂತರವೂ ಸಹ ಬಾಕಿ ಹಣವನ್ನು ಬ್ಯಾಂಕಿಗೆ ಜಮಾ ಮಾಡದ ಕಾರಣದಿಂದ ಡಿಕ್ರಿ ಹಣದ ವಸೂಲಾತಿಗಾಗಿ ಅಮಲ್ಜಾರಿ ಸಂಖ್ಯೆ.212/97–98 ರಂತೆ ಅಮಲ್ಜಾರಿ ಪಡೆದು, ದಿನಾಂಕ:28.2.2001 ರಂದು ಬಹಿರಂಗ ಹರಾಜಿಗೆ ಗುರಿಪಡಿಸಿದ್ದು, ಬಿಡ್ಡುದಾರರು ಬಾರದೇ ಇದ್ದುದರಿಂದ ಡಿಕ್ರಿ ಬಾಕಿದಾರರ ಸ್ಥಿತಿ ಸ್ವತ್ತುಗಳನ್ನು ಉಲ್ಲೇಖ (1)ರಲ್ಲಿ ನಮೂದಿಸಿರುವ ಆದೇಶದ ರೀತ್ಯಾ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿ ಆದೇಶ ನೀಡಲಾಗಿತ್ತು.

ವ್ಯವಸ್ಥಾಪಕರು, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರು ಉಲ್ಲೇಖ (2)ರಲ್ಲಿ ನಮೂದಿಸಿರುವ ಪತ್ರದಲ್ಲಿ, ಸಾಲಗಾರರು ದಿನಾಂಕ:26.5.2005 ರಂದು ರಸೀತಿ ನಂ.2527 ರ ಪ್ರಕಾರ ಸಾಲ ತೀರುವಳಿ ಮಾಡಿರುತ್ತಾರೆ ಎಂಬುದಾಗಿ ಸಾಲ ತೀರುವಳಿ ದೃಢೀಕರಣ ಪತ್ರ ನೀಡಿರುತ್ತಾರೆ, ಹಾಗೂ ದಿನಾಂಕ:14.11.2007 ರಂದು ನಡೆದ ಆಡಳಿತ ಮಂಡಳಿ ಸಭೆಯ ನಡವಳಿಕೆಯಲ್ಲಿ ಸಾಲಗಾರರು ಸಾಲ ತೀರುವಳಿ ಮಾಡಿರುವ ಹಿನ್ನೆಲೆಯಲ್ಲಿ, ಸಾಲಗಾರರಾಗಿದ್ದ ಶ್ರೀ ಗಂಗರಾಜು ಬಿನ್ ಕೆಂಪಯ್ಯ, ಅಪ್ಪಿನಾಯಕನಹಳ್ಳಿ, ತುಮಕೂರು ತಾಲ್ಲೂಕು ಇವರ ಸ್ಥಿರಾಸ್ತಿಯನ್ನು ವರ್ಗಾವಣೆ ಮಾಡಲು ಕೋರಿ ತೀರ್ಮಾನಿಸಿರುತ್ತಾರೆ.

ಇವರ ಮನವಿಯನ್ನು ಒಪ್ಪಿ ಉಲ್ಲೇಖ(1) ರಲ್ಲಿ ದಿನಾಂಕ:13.2.2002 ರಂದು ಹೊರಡಿಸಿದ ಆದೇಶದ ಸ್ಥಿರಾಸ್ತಿಗಳನ್ನು ಪುನಃ ಶ್ರೀ ಗಂಗರಾಜು ಬಿನ್ ಕೆಂಪಯ್ಯ, ಅಪ್ಪಿನಾಯಕನಹಳ್ಳಿ, ತುಮಕೂರು ತಾಲ್ಲೂಕು ವಾಪಸ್ಸು ನೀಡಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ ಕ್ರ. ಸಂ. : ಸನಿ.32/ಎ.ಬಿ.ಎನ್./ಸ್ಥಿರಾಸ್ತಿವರ್ಗಾವಣೆ/40/2007–08, ದಿನಾಂಕ: 28ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಗಮನಿಸಿ, ಶ್ರೀ.ಗೋಪಾಲರೆಡ್ಡಿ, ಕೆ.ಸಿ.ಎಸ್. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ತುಮಕೂರು ಉಪ ವಿಭಾಗ ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ38(ಎ)(15)ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ

ಸಂಖ್ಯೆ. ಸಿ.ಎಂ.ಡಬ್ಲ್ಯೂ/69/ಸಿ.ಎಲ್.ಎಂ./2001. ದಿನಾಂಕ:21.11.2001ರ ರೀತ್ಯಾ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಉಪಯೋಗಿಸಿ, ಶ್ರೀ ಗಂಗರಾಜು ಬಿನ್ ಕೆಂಪಯ್ಯ, ಅಪ್ಪಿನಾಯಕನಹಳ್ಳಿ, ತುಮಕೂರು ತಾಲ್ಲೂಕು, ಇವರ ಸ್ಥಿರಾಸ್ತಿಯನ್ನು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು, ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿ ನೀಡಿದ್ದ ಸ್ಥಿರಾಸ್ತಿಯನ್ನು, ಈಗ ಶ್ರೀ ಗಂಗರಾಜು ಬಿನ್ ಕೆಂಪಯ್ಯ, ಅಪ್ಪಿನಾಯಕನಹಳ್ಳಿ, ತುಮಕೂರು ತಾಲ್ಲೂಕು ಇವರ ಹೆಸರಿಗೆ ಪುನರ್ ವರ್ಗಾವಣೆ ಮಾಡಿ ಆದೇಶ ನೀಡಿರುತ್ತೇನೆ. ಈ ಆದೇಶಕ್ಕೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಅನ್ವಯ ನಮೂನೆ 8ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಲಗತ್ತಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಈ ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 28-4-2008 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು

**ನಮೂನೆ – VIII**

**ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ರ ಅನುಬಂಧ 28(ಎ) ನೋಡಿ ಅದರ ರೀತ್ಯಾ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101 ರನ್ವಯ ಪರಭಾರೆ ಬಗ್ಗೆ ಪ್ರಮಾಣ ಪತ್ರ**

**ಸ್ಥಿರ ಸ್ವತ್ತುಗಳ ವರ್ಗಾವಣೆ ಪ್ರಮಾಣ ಪತ್ರ**

ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಅಪ್ಪಿನಾಯಕನಹಳ್ಳಿ ಗ್ರಾಮದ ವಾಸಿಯಾದ ಶ್ರೀ. ಗಂಗರಾಜು ಬಿನ್ ಕೆಂಪಯ್ಯ ಇವರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 71 ರನ್ವಯ ಆದೇಶವನ್ನು ಜಾರಿ ಮಾಡಿದ್ದರಿಂದ ಸದರಿಯವರ ಸ್ಥಿರ ಸ್ವತ್ತುಗಳನ್ನು ದಿನಾಂಕ:13.02.2002 ರಂದು ಈ ಕಛೇರಿ ಆದೇಶದ ಅಡಿಯಲ್ಲಿ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು, ಇವರಿಗೆ ವರ್ಗಾಯಿಸಿದ್ದು ಸದರಿ ಸಾಲಗಾರರಿಂದ ಬ್ಯಾಂಕಿಗೆ ಬರಬೇಕಾಗಿದ್ದ ಪೂರಾ ಹಣ ಸಂದಾಯವಾಗಿದ್ದು, ಸದರಿ ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ಮರುವರ್ಗಾಯಿಸುವಂತೆ ಬ್ಯಾಂಕಿನ ವ್ಯವಸ್ಥಾಪಕರು ಕೋರಿರುವ ಮೇರೆಗೆ ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕು, ಹಕ್ಕುಬಾಧ್ಯತೆಗಳು ಶ್ರೀ.ಗಂಗರಾಜು ಬಿನ್ ಕೆಂಪಯ್ಯ, ಅಪ್ಪಿನಾಯಕನಹಳ್ಳಿ, ತುಮಕೂರು ತಾಲ್ಲೂಕು, ಇವರಿಗೆ ನಿರ್ದಿಷ್ಟವಾಗಿರತಕ್ಕದ್ದು, ಮತ್ತು ಈ ಆದೇಶದಂತೆ ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ಒಪ್ಪಿಸತಕ್ಕದ್ದೆಂದು ಅಧಿನಿಯಮ 101 ರನ್ವಯ ಈ ಪ್ರಮಾಣ ಪತ್ರ ನೀಡಲಾಗಿದೆ.

**ಸ್ಥಿರ ಸ್ವತ್ತುಗಳ ವಿವರ**

| ಗ್ರಾಮ | ಸರ್ವೆ ನಂಬರ್ | ವಿಸ್ತೀರ್ಣ | ತರಹೆ | ಹಕ್ಕುದಾರರ ವಿಳಾಸ |
|---|---|---|---|---|
| 1. ಅಪ್ಪಿನಾಯಕನಹಳ್ಳಿ | 107 | 4.20 | ಖುಷ್ಕಿ | ಶ್ರೀ ಗಂಗರಾಜು ಬಿನ್ ಕೆಂಪಯ್ಯ |

ಪಿಆರ್.761 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಉಪವಿಭಾಗ ಹಾಗೂ ವಸೂಲಾತಿ ಅಧಿಕಾರಿಗಳ ನಡವಳಿಕೆಗಳು**

**ವಿಷಯ :–** ಅಮಲ್ಜಾರಿ ಸಂಖ್ಯೆ: ಸಿ.ಇ.ಪಿ. 75/2005-06, ಶ್ರೀ ಟಿ.ಎಸ್. ರಾಜೇಂದ್ರ ಪ್ರಸಾದ್ ಬಿನ್ ಟಿ.ಎಸ್. ಶ್ರೀಕಂಠಯ್ಯ ಎಸ್.ಎಸ್.ಪುರಂ, ತುಮಕೂರು ಇವರ ಸ್ಥಿರಾಸ್ತಿಯನ್ನು ತುಮಕೂರು ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿ., ತುಮಕೂರು ಇದರ ಹೆಸರಿಗೆ ವರ್ಗಾಯಿಸಿ ಸ್ಥಿರೀಕರಣ ಆದೇಶ ನೀಡುವ ಬಗ್ಗೆ.

**ಉಲ್ಲೇಖ :–** (1) ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ತುಮಕೂರು ಉಪವಿಭಾಗ ತುಮಕೂರು ಇವರ ಪತ್ರದ ಸಂಖ್ಯೆ: ಮ4/07-08. ದಿನಾಂಕ:14.12.2007.

(2) ಈ ಕಛೇರಿಯಿಂದ ನೀಡಲಾದ ನೋಟೀಸ್ ಕ್ರಮಸಂಖ್ಯೆ. ಸಮಸಂಖ್ಯೆ. ದಿನಾಂಕ:27.12.2007.

**ಪ್ರಸ್ತಾವನೆ :**

ತುಮಕೂರು ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿ., ತುಮಕೂರು ಈ ಸಹಕಾರ ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಮತ್ತು ನಿಯಮ 1960 ರನ್ವಯ ನೋಂದಾಯಿತವಾಗಿರುತ್ತದೆ, ಮತ್ತು ನೊಂದಾಯಿತವಾದ ಉಪನಿಯಮದನ್ವಯ ಕಾರ್ಯನಿರ್ವಹಿಸುತ್ತಿದೆ.

ಈ ಸಹಕಾರ ಸಂಘದಲ್ಲಿ ಶ್ರೀ ಟಿ.ಎಸ್. ರಾಜೇಂದ್ರಪ್ರಸಾದ್ ಬಿನ್ ಟಿ.ಎಸ್. ಶ್ರೀಕಂಠಯ್ಯ, "ಬೇಬಿ ಮಿಲ್ಕ್‌ಬಾರ್" 15ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು ಇವರು ಸ್ಥಿರಾಸ್ತಿ ಆಧಾರಮಾಡಿ ಸಾಲ ಪಡೆದಿದ್ದು ಸಾಲದ ಹಣವನ್ನು ಕರಾರು ರೀತ್ಯಾ ಮರು ಪಾವತಿಸದೆ ಸುಸ್ತಿಯಾಗಿರುತ್ತದೆ. ಸುಸ್ತಿ ಸಾಲದ ಹಣದ ವಸೂಲಾತಿಗಾಗಿ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಇವರ ಕಛೇರಿಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಿದ್ದು, ಈ ದಾವೆ ನಂ.87/2003-2004, ತೀರ್ಪಿನ ದಿನಾಂಕ:31.7.2003 ರಂದು ಡಿಕ್ರಿಯಾಗಿದ್ದು ಸದರಿ ಡಿಕ್ರಿ ಅನುಸಾರ ಅಮಲ್ಜಾರಿ ಸಂಖ್ಯೆ.ಸಿ.ಇ.ಪಿ.ನಂ.75/2005-2006 ಪಡೆಯಲಾಗಿದೆ.

ತೀರ್ಪಿನ ನಂತರವೂ ಸಹ ಡಿಕ್ರಿಯಾದ ಬಾಕಿಹಣವನ್ನು ಸಂಘಕ್ಕೆ ಜಮಾ ಆಗದೇ ಸುಸ್ತಿದಾರರಾದ ಕಾರಣದಿಂದ ಡಿಕ್ರಿಯನ್ನು ವಸೂಲಿ ಕ್ರಮಕ್ಕಾಗಿ ಅಮಲ್ಜಾರಿ ನಂ.ಸಿ.ಇ.ಪಿ.ನಂ.75/2005-2006 ರಂದು ಮಾರಾಟಾಧಿಕಾರಿಯವರ ವಶಕ್ಕೆ ನೀಡಲಾಗಿತ್ತು, ಮಾರಾಟಾಧಿಕಾರಿಗಳು ವಸೂಲಿ ಕ್ರಮ ನಡೆಸಿ ಡಿಕ್ರಿ ಬಾಕಿದಾರರ ಸ್ಥಿರಾಸ್ತಿಯನ್ನು ದಿನಾಂಕ:28.9.2007 ರಂದು

ಮಾರಾಟ ಮಾಡಲು ದಿನಾಂಕ ನಿಗದಿ ಪಡಿಸಿದ್ದು, ಆ ದಿವಸ ಸರ್ಕಾರವು ಸಾರ್ವತ್ರಿಕ ರಜೆಯನ್ನು ಘೋಷಿಸಿದ್ದರಿಂದ ದಿನಾಂಕ:29.9.2007 ಕ್ಕೆ ಹರಾಜನ್ನು ಮುಂದೂಡಿರುತ್ತಾರೆ, ದಿನಾಂಕ:29.9.2007 ರಂದು ಸುಸ್ತಿ ಸಾಲಗಾರರಿಂದ ಒಟ್ಟು ರೂ.3,43,915=00 ಗಳು ಬಾಕಿ ಇರುವುದಾಗಿ ಮಾರಾಟಾಧಿಕಾರಿಗಳ ಪತ್ರದಿಂದ ಕಂಡುಬಂದಿರುತ್ತದೆ, ಸದರಿ ದಿನದಂದು ನಡೆಸಿದ ಬಹಿರಂಗ ಹರಾಜಿಗೆ ಬಿಡ್ಡುದಾರರು ಯಾರೂ ಬಾರದಿದ್ದರಿಂದ ಸಹಕಾರಸಂಘಗಳ ನಿಯಮ 38–ಎ ರನ್ವಯ ಡಿಕ್ರಿ ಹೋಲ್ಡರ್ ಆದ ತುಮಕೂರು ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿ., ತುಮಕೂರು ಇವರ ಹೆಸರಿಗೆ ಸಾಲಗಾರರ ಸ್ಥಿರಾಸ್ತಿಯನ್ನು ವರ್ಗಾವಣೆ ಮಾಡಿ ಖಾಯಂಗೊಳಿಸಲು ಉಲ್ಲೇಖ(1)ರ ರೀತ್ಯಾ ಮಾರಾಟಾಧಿಕಾರಿಗಳು ಕೋರಿರುತ್ತಾರೆ.

ಈ ಕುರಿತು ಈ ಕಛೇರಿಯಿಂದ ಉಲ್ಲೇಖ(2) ದಿನಾಂಕ:27.12.2007ರ ರೀತ್ಯಾ ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 38(ಎ)3 ರ ಪ್ರಕಾರ ಸುಸ್ತಿ ಸಾಲಗಾರರಾದ ಶ್ರೀ ಟಿ.ಎಸ್. ರಾಜೇಂದ್ರ ಪ್ರಸಾದ್ ಬಿನ್ ಟಿ.ಎಸ್.ಶ್ರೀಕಂಠಯ್ಯ, ನವರಿಗೆ ನೋಟೀಸ್ ನೀಡಿ ಈ ನೋಟೀಸ್ ತಲುಪಿದ ಒಂದು ತಿಂಗಳೊಳಗೆ ನಿಮ್ಮಿಂದ ಸಂಘಕ್ಕೆ ಬರಬೇಕಾಗಿರುವ ಮೊತ್ತ ರೂ. 3,43,917=00 ಗಳು ದಿನಾಂಕ:29.9.2007ಕ್ಕೆ ಇದ್ದಂತೆ ಮತ್ತು ನಂತರ ಅದರ ಮೇಲಿನ ಬಡ್ಡಿ ಹಾಗೂ ಇತರೆ ವೆಚ್ಚಗಳನ್ನು ಸದರಿ ಸಂಘಕ್ಕೆ ಪಾವತಿಸಿ ರಸೀತಿ ಪಡೆದುಕೊಳ್ಳಲು ಅಂತಿಮವಾಗಿ ಸೂಚಿಸಲಾಗಿತ್ತು, ಮತ್ತು ಪಾವತಿಸಲು ತಪ್ಪಿದ್ದಲ್ಲಿ ಬಹಿರಂಗ ಹರಾಜಿಗೆ ಒಳಪಡಿಸಲಾದ, ನೀವು ಸಂಘಕ್ಕೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ತುಮಕೂರು ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿ., ತುಮಕೂರು ಇದರ ಹೆಸರಿಗೆ ಕಾನೂನು ಪ್ರಕಾರ ವರ್ಗಾಯಿಸಲಾಗುವುದೆಂದು ಸಹ ತಿಳಿಸಲಾಗಿತ್ತು, ಈ ನೋಟೀಸನ್ನು ಡಿಕ್ರಿ ಬಾಕಿದಾರರಿಗೆ ಜಾರಿಮಾಡಲಾಗಿರುತ್ತದೆ.

ಆದರೆ ಸುಸ್ತಿ ಸಾಲಗಾರರು ಹಣವನ್ನು ಸಂಘಕ್ಕೆ ಪಾವತಿಸಿರುವುದಿಲ್ಲ ಮತ್ತು ಈ ಬಗ್ಗೆ ಆಕ್ಷೇಪಣೆಗಳನ್ನು ಸಹ ಸಲ್ಲಿಸಿರುವುದಿಲ್ಲ.

ಆದ್ದರಿಂದ ಈ ಕೆಳಕಂಡ ಡಿಕ್ರಿ ಬಾಕಿದಾರರ ಸ್ಥಿರ ಸ್ವತ್ತುಗಳನ್ನು, ಡಿಕ್ರಿಹೊಂದಿದ ತುಮಕೂರು ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿ., ತುಮಕೂರು ಇವರ ಹೆಸರಿಗೆ ಸ್ಥಿರೀಕರಣಗೊಳಿಸಿ, ವರ್ಗಾವಣೆ ಮಾಡಲು ಆದೇಶ ನೀಡಲಾಗಿದೆ.

**ಆದೇಶ ಸಂಖ್ಯೆ : ಎಆರ್–32/ಎ.ಬಿ.ಎನ್./288/2007–2008, ದಿನಾಂಕ: 24ನೇ ಮೇ 2008**

ಗೋಪಾಲರೆಡ್ಡಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ ತುಮಕೂರು, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101(ಬಿ) ಅನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ.ಸಿ.ಎಂ.ಡಬ್ಲ್ಯೂ./69/ಸಿ.ಎಲ್.ಎಂ./2001. ದಿನಾಂಕ:21.11.2001 ರ ರೀತ್ಯಾ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಪ್ರಯೋಗಿಸಿ ಶ್ರೀ ಟಿ.ಎಸ್. ರಾಜೇಂದ್ರಪ್ರಸಾದ್ ಬಿನ್ ಟಿ.ಎಸ್. ಶ್ರೀಕಂಠಯ್ಯ, "ಬೇಬಿಮಿಲ್ಕ್‌ಬಾರ್" 15ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು ಇವರ ಸ್ಥಿರಾಸ್ತಿಯನ್ನು, ತುಮಕೂರು ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿ., ತುಮಕೂರು ಈ ಸಹಕಾರ ಸಂಘದ ಹೆಸರಿಗೆ ಸ್ಥಿರೀಕರಣಗೊಳಿಸಿ, ವರ್ಗಾವಣೆ ಮಾಡಿ ಆದೇಶ ನೀಡಿರುತ್ತೇನೆ. ಮತ್ತು ಈ ಆದೇಶಕ್ಕೆ ಲಗತ್ತಿಸಿರುವ ಸಹಕಾರ ಸಂಘಗಳ ಕಾಯಿದೆ ಕಲಂ 38ಎ 5 ರಲ್ಲಿ ನಮೂದಿಸಿರುವ ನಮೂನೆ VIIIರಲ್ಲಿ ವಿವರಿಸಿರುವಂತೆ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಸ್ಥಿರಸ್ವತ್ತನ್ನು ಸ್ಥಿರೀಕರಣಗೊಳಿಸಿದ ವರ್ಗಾವಣೆಯ ಪತ್ರವನ್ನು ಅಲಾಯಿದೆ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಈ ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ:24–5–2008 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಅಪರ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು

**ನಮೂನೆ – VIII**

**(ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ರ ನಿಯಮ 28 ಎ ನಿಬಂಧನೆ ನೋಡಿ)**

**ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101ಬಿ ಪ್ರಕಾರ ಆಸ್ತಿ ವರ್ಗಾವಣೆ ಮಾಡಲು ಸರ್ಟಿಫಿಕೇಟ್**

1959ರ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 71ರ ಪ್ರಕಾರ ತೀರ್ಪುಕೊಟ್ಟ ಪ್ರಕಾರ ಶ್ರೀ ಟಿ.ಎಸ್.ರಾಜೇಂದ್ರಪ್ರಸಾದ್ ಬಿನ್ ಟಿ.ಎಸ್. ಶ್ರೀಕಂಠಯ್ಯ, "ಬೇಬಿ ಮಿಲ್ಕ್‌ಬಾರ್" 15ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು ಇವರ ಸ್ಥಿರಾಸ್ತಿಯನ್ನು, ತುಮಕೂರು ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿ., ತುಮಕೂರು ಈ ಸಹಕಾರ ಸಂಘದ ಪರ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ಮಾರಾಟಮಾಡುವ ವಿಚಾರದಲ್ಲಿ ಕೊಳ್ಳುವವರಿಲ್ಲದ ಪ್ರಯುಕ್ತ ಆಸ್ತಿಯು ಮಾರಾಟವಾಗುವುದಿಲ್ಲವೆಂದು ಮಾರಾಟಾಧಿಕಾರಿಗಳಿಗೆ ಮನವರಿಕೆಯಾಗಿರುತ್ತದೆ.

ಆದ್ದರಿಂದ ಸಹಕಾರಿ ಕಾಯಿದೆ 101ಬಿ ಕಲಂ ಪ್ರಕಾರ ಸಾಲ ಕೊಡಬೇಕಾಗಿರುವವರ ಆಸ್ತಿಯ ಹಕ್ಕು ಮೇಲ್ಕಂಡ ಸಹಕಾರ ಸಂಘಕ್ಕೆ ಸೇರಿರುವುದಾಗಿದೆಯೆಂದು, ಆಸ್ತಿಯನ್ನು ಸಂಘಕ್ಕೆ ವಹಿಸತಕ್ಕದ್ದೆಂದು, ಈ ಆಸ್ತಿಯನ್ನು ಸ್ಥಿರೀಕರಣಗೊಳಿಸಿ, ಸಂಘದ ಹೆಸರಿಗೆ ವರ್ಗಾವಣೆಗೆ ಈ ಕೆಳಕಂಡ ಷೆಡ್ಯೂಲಿನ ಷರತ್ತುಗಳಿಗೆ ಒಳಪಟ್ಟಿರುವುದೆಂದು ಆದೇಶ ಮಾಡಲಾಗಿದೆ.

–: ಸ್ವತ್ತಿನ ವಿವರ :–

| ಕ್ರ. ಸಂ. | ಮುನಿಸಿಪಲ್ ಖಾತೆ ನಂಬರ್ | ಸ್ವತ್ತಿನ ವಿವರ | ವಿಸ್ತೀರ್ಣ |
|---|---|---|---|
| 1 | 2 | 3 | 4 |
| 1. | ಹಳೆಯ ನಂ. 3009/ಎಬಿ3010 ಹೊಸ ನಂ. 3010:2844 | ಅಂಗಡಿ ಮಳಿಗೆಗಳು ತುಮಕೂರು ಟೌನ್ ಎಸ್.ಎಸ್.ಪುರಂ ಮುಖ್ಯರಸ್ತೆ, 22ನೇ ವಾರ್ಡ್‌ನಲ್ಲಿರುವುದು | ಪೂರ್ವ/ ಪಶ್ಚಿಮ–ಉತ್ತರದ ಕಡೆ 13 ಅಡಿ<br>ಪೂರ್ವ/ ಪಶ್ಚಿಮ–ದಕ್ಷಿಣದ ಕಡೆ 6.6ಅಡಿ<br>ಪೂರ್ವ/ ಪಶ್ಚಿಮ–ದಕ್ಷಿಣದ ಕಡೆ ಅಂದರೆ ನೈರುತ್ಯ ಮೂಲೆ 10.6 ಅಡಿ<br>ಉತ್ತರ–ದಕ್ಷಿಣ, ಪೂರ್ವದ ಕಡೆ 21.6 ಅಡಿವುಳ್ಳ ಅಂಗಡಿಮಳಿಗೆಗಳು |

| ಚಕ್ಕುಬಂದಿ | ಸಾಲ ತೆಗೆದುಕೊಂಡಿರುವವರ ಸ್ವಾಮ್ಯ ಹಕ್ಕು ಬಾಧ್ಯತೆ | ಆಸ್ತಿಯ ಮೇಲಿರುವ ಸಾಲಗಳ ವಿವರಗಳು |
|---|---|---|
| 5 | 6 | 7 |
| ಪೂರ್ವಕ್ಕೆ : ಕೃಷ್ಣಯ್ಯಶೆಟ್ಟಿ ಅಂಗಡಿ ಜಂಟಿಗೋಡೆ<br>ಪಶ್ಚಿಮಕ್ಕೆ : ರಸ್ತೆ<br>ಉತ್ತರಕ್ಕೆ : ಕಾಂತರಾಜುರವರ ಮನೆ<br>ದಕ್ಷಿಣಕ್ಕೆ : ರಸ್ತೆ | ಶ್ರೀ ಟಿ.ಎಸ್. ರಾಜೇಂದ್ರಪ್ರಸಾದ್ ಬಿನ್ ಟಿ.ಎಸ್. ಶ್ರೀಕಂಠಯ್ಯ, ಎಸ್.ಎಸ್. ಪುರಂ, ತುಮಕೂರು | ರೂ. 3,43,915=00 ಮತ್ತು ಬಡ್ಡಿ, ಇತರೆ ಖರ್ಚುಗಳು |

**ಷರತ್ತು ಮತ್ತು ನಿಯಮಗಳು**

1. ಸಂಘಕ್ಕೆ ಸ್ಥಿರೀಕರಣಗೊಳಿಸಿ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತನ್ನು ಸಂಘವು ಉಪಯೋಗಿಸತಕ್ಕದ್ದು.
2. ಈ ಆಸ್ತಿಯನ್ನು ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಯನ್ನು ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡತಕ್ಕದ್ದು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು

ಪಿ.ಆರ್. 762 ತುಮಕೂರು ಉಪವಿಭಾಗ, ತುಮಕೂರು

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂ : ಎಲ್.ಎನ್.ಡಿ.(ಪೂ)ಸಿಆರ್:164/07–08, ಬೆಂಗಳೂರು, ದಿನಾಂಕ:16ನೇ ಜೂನ್ 2008**

**ವಿಷಯ :–** ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಸೂಲಿಕುಂಟೆ ಗ್ರಾಮದ ಸ.ನಂ. 123/ಪಿ1 ರಲ್ಲಿನ 0–37 ಗುಂಟೆ ವಿಸ್ತೀರ್ಣದ ಗೋಮಾಳದ ಜಮೀನನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ರವರಿಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ :–**
1. ಸರ್ಕಾರದ ಪತ್ರ ಸಂ.:ಆರ್.ಡಿ.:265:ಎಲ್‌ಜಿಬಿ:2007 (ಭಾಗ–6) ಬೆಂಗಳೂರು, ದಿನಾಂಕ: 18–10–2007.
2. ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರ ಪತ್ರದ ಸಂ.ಎಲ್‌ಎನ್‌ಡಿ:ಸಸ:ಸಿಆರ್:490/07–08, ದಿನಾಂಕ:24–10–2007.
3. ಈ ಕಛೇರಿ ಸಮ ಸಂಖ್ಯೆ ತಿಳುವಳಿಕೆ ಪತ್ರದ ದಿನಾಂಕ:03–11–2007
4. ಕಾರ್ಯಪಾಲಕ ಅಭಿಯಂತರರು (ವಿದ್ಯುತ್), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತರವರ ಪತ್ರ ಸಂಖ್ಯೆ:ಇಇಇ/ಬಿಎಂಡಬ್ಲ್ಯೂಎಸ್‌ಡಿ:ಸಿವಿಲ್:08–09/324–29 ದಿನಾಂಕ: 28.04.2008

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3,313–28 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಸರ್ಕಾರಿ/ಸಾರ್ವಜನಿಕ ಉಪಯೋಗಕ್ಕಾಗಿ ಸಂಬಂಧಿಸಿದ ಸಂಸ್ಥೆಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ, ಉಲ್ಲೇಖ(1)ರಲ್ಲಿನ ಸರ್ಕಾರದ ಸಂಖ್ಯೆ:ಆರ್‌ಡಿ 265:ಎಲ್‌ಜಿಬಿ 2007 (ಭಾಗ–6), ಬೆಂಗಳೂರು ದಿನಾಂಕ:18–10–2007ರ ಆದೇಶದಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಸೂಲಿಕುಂಟೆ ಗ್ರಾಮದ ಸ.ನಂ. 123/ಪಿ1 ರಲ್ಲಿನ 4–37 ಗುಂಟೆ ವಿಸ್ತೀರ್ಣದ ಗೋಮಾಳದ ಜಮೀನನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ರವರಿಗೆ ಪೂರ್ಣ ಮಾರುಕಟ್ಟೆ ಮೌಲ್ಯ ನಿಗದಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1)(ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತರವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕ ಸೇರಿ ಒಟ್ಟು ರೂ. 6,04,50,687–00 (ಆರು ಕೋಟಿ ನಾಲ್ಕು ಲಕ್ಷದ ಐವತ್ತು ಸಾವಿರದ ಆರು ನೂರ ಎಂಭತ್ತೇಳು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ಉಲ್ಲೇಖ(3) ರ ದಿನಾಂಕ:03–11–2007 ರಂದು ತಿಳುವಳಿಕೆ ಪತ್ರವನ್ನು ನೀಡಲಾಗಿರುತ್ತದೆ. ಅದರಂತೆ ಉಲ್ಲೇಖ(4) ಪತ್ರದಲ್ಲಿ ಸಂಸ್ಥೆಗೆ ಈ ಸರ್ವೆ ನಂಬರ್‌ನಲ್ಲಿ 4–37 ಎಕರೆ/ಗುಂಟೆ ಪೈಕಿ 0–37 ಗುಂಟೆ ವಿಸ್ತೀರ್ಣದ ಜಮೀನು ಮಾತ್ರ ಲಭ್ಯವಾಗುತ್ತದೆಯೆಂದು, ಮಾರುಕಟ್ಟೆ ಮೌಲ್ಯ 1,01,75,000–00, ಭೂ ಪರಿವರ್ತನಾ ಶುಲ್ಕ ರೂ.1,61,172 ಮತ್ತು ಪೋಡಿ ಶುಲ್ಕ ರೂ. ರೂ.55–00 ಒಟ್ಟು ರೂ. 1,03,36,227–00 ಗಳನ್ನು ಮೇಲ್ಕಂಡ ಸಂಸ್ಥೆಯವರು ಸರ್ಕಾರಕ್ಕೆ ಚಲನ್ ನಂ.31, 32 ಮತ್ತು 33 ರಂತೆ ದಿನಾಂಕ:17–04–2008 ರಂದು ಹಣ ಸಂದಾಯ ಮಾಡಿ, ಮೂಲ ಚಲನ್ ಹಾಜರುಪಡಿಸಿದ್ದು, ನಕ್ಷೆಯೊಂದಿಗೆ ಸಂಸ್ಥೆಗೆ ಜಮೀನನ್ನು ಹಸ್ತಾಂತರಿಸುವಂತೆ ಉಲ್ಲೇಖ(4)ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1) ರ ಸರ್ಕಾರದ ಆದೇಶದಂತೆ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಸೂಲಿಕುಂಟೆ ಗ್ರಾಮದ ಸರ್ವೆ ನಂ. 123/ಪಿ1 ರಲ್ಲಿನ 0–37 ಗುಂಟೆ ವಿಸ್ತೀರ್ಣದ ಗೋಮಾಳದ ಜಮೀನನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ರವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)ಸಿ)ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1. ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.
2. ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.
3. ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.
4. ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆ, ಆಧಾರ, ಭೋಗ್ಯಕ್ಕೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯುವ ಉದ್ದೇಶಕ್ಕೆ ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತೀರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ಸಂಸ್ಥೆ ಮತ್ತು ಇತರೆ ಪ್ರಾಧಿಕಾರಗಳು ಮುಟ್ಟುಗೋಲು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.
5. ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.
6. ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.
7. ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
8. ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವೆಂದು ಕಂಡುಬಂದಲ್ಲಿ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಅಭಿವೃದ್ಧಿಪಡಿಸಿದ ಬಾಬ್ತು ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.
9. ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಗೆ ನಿಗದಿತ ಶುಲ್ಕ/ ಸಂದಾಯ/ತೆರಿಗೆ ಸಂದಾಯ ಮಾಡಿ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.
10. ಶಾಸನಬದ್ಧ ಕಾಯ್ದೆಗಳ ಕಟ್ಟುಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.
11. ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆ ಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.
12. ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
13. ಈ ಜಮೀನಿನಲ್ಲಿ ದೊಡ್ಡ ಮತ್ತು ಸಣ್ಣ ಕೆರೆಕಟ್ಟೆ ಇತ್ಯಾದಿಗಳಿದ್ದಲ್ಲಿ ನಕಾಶೆ ದಾರಿಗಳಿದ್ದಲ್ಲಿ ಸಾರ್ವಜನಿಕ ಆಸ್ತಿಯನ್ನು ಸಂರಕ್ಷಿಸಿ ನಿರ್ವಹಿಸತಕ್ಕದ್ದು. ಇವುಗಳ ಮೇಲೆ ಮಂಜೂರಿದಾರರಿಗೆ ಯಾವುದೇ ಹಕ್ಕು ಇರುವುದಿಲ್ಲ.
14. ಆರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2) ರಡಿಯಲ್ಲಿ ನಿಗದಿಪಡಿಸಿರುವ ನಮೂನೆ/ಫಾರಂ–VIರಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ, ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಆರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,

ಪಿ.ಆರ್. 699 ಬೆಂಗಳೂರು ಜಿಲ್ಲೆ, ಬೆಂಗಳೂರು